KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಜೂನ್ ೧೫, ೨೦೦೬ (ಜೇಷ್ಠ ೨೫, ಶಕ ವರ್ಷ ೧೯೨೮) | ಸಂಚಿಕೆ ೨೪ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಬೆಂಗಳೂರು–ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಯೋಜನೆಗೆ ಸಹ ಕಾರ್ಯದರ್ಶಿ ಹಾಗೂ ಪೂರಕ ಸಿಬ್ಬಂದಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 34 ಸಸಿವಿ 97, ದಿನಾಂಕ: 5.2.1998.
2) ಟಿಪ್ಪಣಿ ಸಂಖ್ಯೆ: ಲೋಇ 647 ಸೇಸಪ 2004, ದಿನಾಂಕ: 27.12.2004.

**ಪ್ರಸ್ತಾವನೆ:**

ಮೇಲೆ ಉಲ್ಲೇಖಿಸಿರುವ ವಿಷಯಕ್ಕೆ ಸಂಬಂಧಿಸಿದಂತೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಬೆಂಗಳೂರು–ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಯೋಜನೆಯನ್ನು ಅನುಷ್ಠಾನಗೊಳಿಸುವ ಸಂಬಂಧ ಸರ್ಕಾರದ ಸಚಿವಾಲಯದ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಯಲ್ಲಿ ಯೋಜನಾ ಸಮನ್ವಯಾಧಿಕಾರಿ ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಯೊಂದಿಗೆ ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಸೃಜಿಸಲಾಗಿತ್ತು.

| | | |
|---|---|---|
| 1. | ಶೀಘ್ರಲಿಪಿಗಾರ | 1 ಹುದ್ದೆ |
| 2. | ಕಿರಿಯ ಸಹಾಯಕ | 1 ಹುದ್ದೆ |
| 3. | ದಲಾಯತ್ | 1 ಹುದ್ದೆ |
| 4. | ವಾಹನ ಚಾಲಕ | 1 ಹುದ್ದೆ |

ಈ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರೆಸಿಕೊಂಡು ಬರಲಾಗಿದ್ದು, ಮುಂದುವರೆಸಲಾಗಿದ್ದ ಅವಧಿಯು ದಿನಾಂಕ: 31.12.2004ಕ್ಕೆ ಮುಕ್ತಾಯಗೊಂಡಿರುತ್ತದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾಗಿರುವ ಟಿಪ್ಪಣಿಯಲ್ಲಿ ಸರ್ಕಾರದ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ ಇವರು ಯೋಜನಾ ಸಮನ್ವಯಾಧಿಕಾರಿ ಹುದ್ದೆಯನ್ನು ಯೋಜನಾ ಸಮನ್ವಯಾಧಿಕಾರಿ ಹಾಗೂ ಪದನಿಮಿತ್ತ ಜಂಟಿ ಕಾರ್ಯದರ್ಶಿ ಎಂದು ಪದನಾಮೀಕರಿಸಿ ದಿನಾಂಕ: 31.12.2004 ರಿಂದ ಒಂದು ವರ್ಷದವರೆಗೆ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 96 ಸಸಿವಿ 2004, ಬೆಂಗಳೂರು, ದಿನಾಂಕ: 15ನೇ ಮೇ 2006**

ಬೆಂಗಳೂರು–ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಯೋಜನೆಗೆ ಸಂಬಂಧಿಸಿದಂತೆ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಯಲ್ಲಿ ಸರ್ಕಾರದ ಸಹ ಕಾರ್ಯದರ್ಶಿ ವೇತನ ಶ್ರೇಣಿಯ ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.1.2005 ರಿಂದ 31.12.2005 ರವರೆಗೆ ಸೃಜಿಸಲಾಗಿದೆ.

| | | |
|---|---|---|
| 1. | ಶೀಘ್ರಲಿಪಿಗಾರ | 1 ಹುದ್ದೆ |
| 2. | ಕಿರಿಯ ಸಹಾಯಕ | 1 ಹುದ್ದೆ |
| 3. | ದಲಾಯತ್ | 1 ಹುದ್ದೆ |
| 4. | ವಾಹನ ಚಾಲಕ | 1 ಹುದ್ದೆ |

ದಿನಾಂಕ: 5.2.1998ರ ಸರ್ಕಾರಿ ಆದೇಶದಲ್ಲಿ ವೇತನ ಶ್ರೇಣಿ ರೂ. 3825–5825 ರಲ್ಲಿ ಸೃಜಿಸಲಾದ ತಾತ್ಕಾಲಿಕ ಹುದ್ದೆಯಾದ ಯೋಜನಾ ಸಮನ್ವಯಾಧಿಕಾರಿ ಹುದ್ದೆಯನ್ನು ದಿನಾಂಕ: 1.1.2005 ರಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 747 ವೆಚ್ಚ/5 2005, ದಿನಾಂಕ: 24.5.2005ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 817 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2).

## ಶಿಕ್ಷಣ ಸಚಿವಾಲಯ

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಬೆಂಗಳೂರಿನ ರಾಯಲ್ ಕಾನ್‌ಕಾರ್ಡ್ ಎಜುಕೇಷನಲ್ ಟ್ರಸ್ಟ್, ಇದರ ರಾಯಲ್ ಕಾನ್‌ಕಾರ್ಡ್ ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು, ಈ ಕಾಲೇಜಿಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:** (1) ದಿನಾಂಕ:26-12-2003ರ ಸಂಖ್ಯೆ: ಇಡಿ 321 ಯುಆರ್‌ಸಿ 2003ರ ಸರ್ಕಾರಿ ಆದೇಶ.

(2) ದಿನಾಂಕ:06-01-2006, ಸಂಖ್ಯೆ: F.SRO/NCTE/B.Ed/ 2005-06/5119ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.

(3) ದಿ:09-01-2006ರ ಅಧ್ಯಕ್ಷರು, ರಾಯಲ್ ಕಾನ್‌ಕಾರ್ಡ್ ಎಜುಕೇಷನಲ್ ಟ್ರಸ್ಟ್ ಬೆಂಗಳೂರು ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ(1)ರಲ್ಲಿರುವ ಸರ್ಕಾರಿ ಆದೇಶದಲ್ಲಿ **ಬೆಂಗಳೂರಿನ ರಾಯಲ್ ಕಾನ್‌ಕಾರ್ಡ್ ಎಜುಕೇಷನಲ್ ಟ್ರಸ್ಟ್, ಇದರ ರಾಯಲ್ ಕಾನ್‌ಕಾರ್ಡ್ ಕಾಲೇಜ್ ಆಫ್ ಎಜುಕೇಷನ್, ಚಳ್ಳಕೆರೆ, ಕಲ್ಯಾಣ ನಗರ್ ಪೋಸ್ಟ್, ಬಾಣಸವಾಡಿ ಔಟ್‌ರಿಂಗ್ ರೋಡ್, ಬೆಂಗಳೂರು, ಈ ಕಾಲೇಜಿನ ಬಿ.ಎಡ್ ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ(2)ರಲ್ಲಿರುವ** ದಿನಾಂಕ: 06-01-2006ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100(ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ(3)ರಲ್ಲಿರುವ ದಿನಾಂಕ: **09-01-2006**ರ ಪತ್ರದಲ್ಲಿ ಸದರಿ ಸಂಸ್ಥೆಯ ಅಧ್ಯಕ್ಷರು ತಮ್ಮ ಕಾಲೇಜಿನಲ್ಲಿ **ಬಿ.ಎಡ್ ಕೋರ್ಸನ್ನು** ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 14 ಯುಬಿವಿ 2006, ಬೆಂಗಳೂರು, ದಿನಾಂಕ: 12ನೇ ಮೇ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, **ಬೆಂಗಳೂರಿನ ರಾಯಲ್ ಕಾನ್‌ಕಾರ್ಡ್ ಎಜುಕೇಷನಲ್ ಟ್ರಸ್ಟ್, ಇದರ ರಾಯಲ್ ಕಾನ್‌ಕಾರ್ಡ್ ಕಾಲೇಜ್ ಆಫ್ ಎಜುಕೇಷನ್, ಚಳ್ಳಕೆರೆ, ಕಲ್ಯಾಣ ನಗರ್ ಪೋಸ್ಟ್, ಬಾಣಸವಾಡಿ ಔಟ್‌ರಿಂಗ್ ರೋಡ್, ಬೆಂಗಳೂರು, ಈ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ)** ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 785 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಶಿವಮೊಗ್ಗದ ಎ.ವಿ.ಎಸ್. ಎಜುಕೇಷನ್ ಟ್ರಸ್ಟ್‌ನ ಚಿಕ್ಕಮಗಳೂರು ಜಿಲ್ಲೆಯ, ತರೀಕೆರೆ ತಾಲ್ಲೂಕಿನ ಗಂಟೆಕಣಿವೆಯ ಎ.ವಿ.ಎಸ್. ಕಾಲೇಜ್ ಆಫ್ ಎಜುಕೇಷನ್‌ಗೆ ವಿದ್ಯಾರ್ಥಿ ಪ್ರಮಾಣದ ನಿರ್ಧರಣೆ.

**ಉಲ್ಲೇಖ:** (1) ದಿ:21-02-2004ರ ಸಂ:ಇಡಿ 273 ಯುಆರ್‌ಸಿ 2004ರ ಸರ್ಕಾರಿ ಆದೇಶ.

(2) ದಿನಾಂಕ:24-12-2005, ಸಂಖ್ಯೆ: F.SRO/NCTE/B.Ed/ 2005-06/4927ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.

(3) ದಿ:31-01-2006ರ ಮ್ಯಾನೇಜಿಂಗ್ ಟ್ರಸ್ಟಿ, ಎ.ವಿ.ಎಸ್. ಕಾಲೇಜ್ ಆಫ್ ಎಜುಕೇಷನ್, ಗಂಟೆಕಣಿವೆ, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸ ಲಾಗುತ್ತಿರುವ ಬಿ.ಇಡಿ/ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ

ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ(1)ರಲ್ಲಿರುವ ಸರ್ಕಾರಿ ಆದೇಶದಲ್ಲಿ **ಶಿವಮೊಗ್ಗದ ಎ.ವಿ.ಎಸ್. ಎಜುಕೇಷನ್ ಟ್ರಸ್ಟ್‌ನ ಚಿಕ್ಕಮಗಳೂರು ಜಿಲ್ಲೆಯ, ತರೀಕೆರೆ ತಾಲ್ಲೂಕಿನ ಗಂಟೆಕಣಿವೆಯ ಎ.ವಿ.ಎಸ್. ಕಾಲೇಜ್ ಆಫ್ ಎಜುಕೇಷನ್, ಗಂಟೆಕಣಿವೆ, ಎನ್.ಹೆಚ್. 206, ಬಿ.ಹೆಚ್. ರೋಡ್, ಎಂ.ಸಿ. ಹಳ್ಳಿ ಅಂಚೆ, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ, ಈ ಕಾಲೇಜಿನ ಬಿ.ಎಡ್ ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2) ರಲ್ಲಿರುವ** ದಿನಾಂಕ: 24-12-2005ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100(ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ(3)ರಲ್ಲಿರುವ ದಿನಾಂಕ:31-01-2006ರ ಪತ್ರದಲ್ಲಿ ಸದರಿ ಸಂಸ್ಥೆಯ ಅಧ್ಯಕ್ಷರು ತಮ್ಮ ಕಾಲೇಜಿನಲ್ಲಿ **ಬಿ.ಎಡ್ ಕೋರ್ಸನ್ನು** ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 30 ಯುಆರ್‌ಸಿ 2006, ಬೆಂಗಳೂರು, ದಿನಾಂಕ: 5ನೇ ಮೇ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, **ಶಿವಮೊಗ್ಗದ ಎ.ವಿ.ಎಸ್. ಎಜುಕೇಷನ್ ಟ್ರಸ್ಟ್‌ನ ಚಿಕ್ಕಮಗಳೂರು ಜಿಲ್ಲೆಯ, ತರೀಕೆರೆ ತಾಲ್ಲೂಕಿನ ಗಂಟೆಕಣಿವೆಯ ಎ.ವಿ.ಎಸ್. ಕಾಲೇಜ್ ಆಫ್ ಎಜುಕೇಷನ್, ಗಂಟೆಕಣಿವೆ, ಎನ್.ಹೆಚ್. 206, ಬಿ.ಹೆಚ್. ರೋಡ್, ಎಂ.ಸಿ. ಹಳ್ಳಿ ಅಂಚೆ, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ, ಈ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ)** ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 786 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಕೆ.ಜಿ.ಎಫ್‌ನ ನೂರಿ ಎಜುಕೇಷನಲ್ ಅಂಡ್ ಕಲ್ಚರಲ್ ಟ್ರಸ್ಟ್‌ನ ನೂರಿ ಕಾಲೇಜ್ ಆಫ್ ಎಜುಕೇಷನ್, ಕೆ.ಜಿ.ಎಫ್, ಈ ಕಾಲೇಜಿಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:** (1) ದಿನಾಂಕ: 08-01-2004ರ ಸಂಖ್ಯೆ: ಇಡಿ 17 ಯುಆರ್‌ಸಿ 2003ರ ಸರ್ಕಾರಿ ಆದೇಶ.

(2) ದಿನಾಂಕ:21-12-2005, ಸಂಖ್ಯೆ: F.SRO/NCTE/B.Ed/2005-06/4840ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.

(3) ದಿ:15-02-2006ರ ಸಂ.NCE/B.Ed.Affiliation/002/2005-06 ಅಧ್ಯಕ್ಷರು, ನೂರಿ ಎಜುಕೇಷನಲ್ ಅಂಡ್ ಕಲ್ಚರಲ್ ಟ್ರಸ್ಟ್, ಕೆ.ಜಿ.ಎಫ್ ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ(1)ರಲ್ಲಿರುವ ಸರ್ಕಾರಿ ಆದೇಶದಲ್ಲಿ **ಕೆ.ಜಿ.ಎಫ್‌ನ ನೂರಿ ಎಜುಕೇಷನಲ್ ಅಂಡ್ ಕಲ್ಚರಲ್ ಟ್ರಸ್ಟ್‌ನ ನೂರಿ ಕಾಲೇಜ್ ಆಫ್ ಎಜುಕೇಷನ್, ಆಲ್-ಹಜ್ಮ ನೂರುನ್ನಿಸ್ಸ ರೋಡ್, ಅಂಡರ್‌ಸನ್‌ಪೇಟ್, ಕೆ.ಜಿ.ಎಫ್, ಕೋಲಾರ ಜಿಲ್ಲೆ, ಈ ಕಾಲೇಜಿನ ಬಿ.ಎಡ್ ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ(2)ರಲ್ಲಿರುವ** ದಿನಾಂಕ: 21-12-2005ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100(ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ(3)ರಲ್ಲಿರುವ ದಿನಾಂಕ:15-02-2006ರ ಪತ್ರದಲ್ಲಿ ಸದರಿ ಸಂಸ್ಥೆಯ ಅಧ್ಯಕ್ಷರು ತಮ್ಮ ಕಾಲೇಜಿನಲ್ಲಿ **ಬಿ.ಎಡ್ ಕೋರ್ಸನ್ನು** ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 36 ಯುಬಿವಿ 2006, ಬೆಂಗಳೂರು, ದಿನಾಂಕ: 9ನೇ ಮೇ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, **ಕೆ.ಜಿ.ಎಫ್‌ನ ನೂರಿ ಎಜುಕೇಷನಲ್ ಅಂಡ್ ಕಲ್ಚರಲ್ ಟ್ರಸ್ಟ್‌ನ ನೂರಿ ಕಾಲೇಜ್ ಆಫ್ ಎಜುಕೇಷನ್, ಆಲ್-ಹಜ್ಮ ನೂರುನ್ನಿಸ್ಸ ರೋಡ್, ಅಂಡರ್‌ಸನ್‌ಪೇಟ್, ಕೆ.ಜಿ.ಎಫ್, ಕೋಲಾರ ಜಿಲ್ಲೆ, ಈ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ)** ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 787 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಬಿ.ಟಿ.ಪೆಮ್ಮಯ್ಯ, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ (ಪ್ರೌಢ ಶಿಕ್ಷಣ) ಮತ್ತು ಇತರರ ವಿರುದ್ಧ ಇಲಾಖಾ ವಿಚಾರಣೆ-ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಸಂಖ್ಯೆ:ಸಿಆಸುಇ 133 ಎಸ್ಇಎನ್ 02 ದಿ:25.03.03 ಹಾಗೂ 26.03.03.
2) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 133 ಎಸ್ಇಎನ್ 02 ದಿ:08.09.2004.
3) ಶ್ರೀ ಟಿ.ಸಂತಾನಂ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರ ವರದಿ ದಿ:14.06.2005.

**ಪ್ರಸ್ತಾವನೆ:**

ಶ್ರೀ ಬಿ.ಟಿ.ಪೆಮ್ಮಯ್ಯ, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಅವರು 1997-98ನೇ ಸಾಲಿನಲ್ಲಿ ಮೈಸೂರು ವಿಭಾಗದ ಸಹ ನಿರ್ದೇಶಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ ಹಾಸನದ ಸಹ್ಯಾದ್ರಿ ದೈಹಿಕ ಶಿಕ್ಷಣ ಕಾಲೇಜಿನಲ್ಲಿ, ಎನ್.ಸಿ.ಟಿ.ಇ.ಮಾನ್ಯತೆ ಪಡೆಯದಿದ್ದರೂ ಅನಧಿಕೃತ ಕಾಲೇಜಿನ 30 ವಿದ್ಯಾರ್ಥಿಗಳನ್ನು ನಿಯಮಬಾಹಿರವಾಗಿ ಅನುಮೋದಿಸುವ ಮೂಲಕ, ಕರ್ನಾಟಕ ಮಾನ್ಯತೆ ಪಡೆಯದ ಮತ್ತು ಸಂಯೋಜಿತವಲ್ಲದ ಶಿಕ್ಷಣ ಸಂಸ್ಥೆಗಳ ವಿದ್ಯಾರ್ಥಿಗಳ ಪ್ರವೇಶ ಅಧಿನಿಯಮ 1992ರ ನಿಯಮ 3ನ್ನು ಉಲ್ಲಂಘಿಸಿದ ಆರೋಪಗಳಿಗಾಗಿ ಶ್ರೀ ಬಿ.ಟಿ.ಪೆಮ್ಮಯ್ಯ, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಶ್ರೀ ಟಿ.ಸಿ.ಮುನಿಸ್ವಾಮಿ, ನಿವೃತ್ತ ವಿಭಾಗೀಯ ದೈಹಿಕ ಶಿಕ್ಷಣ ಅಧೀಕ್ಷಕರು, ಶ್ರೀ ಪ್ರಭು ಸೋನಾಳೆ, ಪತ್ರಾಂಕಿತ ಸಹಾಯಕರು, ಶ್ರೀಮತಿ ಶೀಲಾ ಪತ್ರಾಂಕಿತ ವ್ಯವಸ್ಥಾಪಕರು, ಶ್ರೀಮತಿ ಎಂ.ಡಿ.ಶಾರದಾಂಬ, ವ್ಯವಸ್ಥಾಪಕರು, ಶ್ರೀ ಬಿ.ಶ್ರೀನಿವಾಸ ದ್ವಿತೀಯ ದರ್ಜೆ ಸಹಾಯಕ ಅವರುಗಳ ವಿರುದ್ಧ ಮೇಲೆ (1)ರಲ್ಲಿ ಓದಲಾದ ನೋಟೀಸು ಜಾರಿ ಮಾಡಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಅವರು ಸಲ್ಲಿಸಿದ್ದ ಉತ್ತರವನ್ನು ಪರಿಶೀಲಿಸಿ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ಮೇಲೆ (2)ರಲ್ಲಿ ಓದಲಾದ ದಿ:08.09.04ರ ಸರ್ಕಾರಿ ಆದೇಶದಲ್ಲಿ ಶ್ರೀ ಟಿ.ಸಂತಾನಂ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿ:14.06.05ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ.

ಶ್ರೀ ಬಿ.ಟಿ.ಪೆಮ್ಮಯ್ಯ ಹಾಗೂ ಇತರರ ವಿರುದ್ಧ ಮಾಡಲಾದ ಆರೋಪಗಳನ್ನು ಸಾಬೀತುಪಡಿಸಲು ಶಿಸ್ತು ಪ್ರಾಧಿಕಾರ ವಿಫಲವಾಗಿರುವುದರಿಂದ ಆರೋಪ ಸಾಬೀತಾಗಿಲ್ಲವೆಂದು ವಿಚಾರಣಾಧಿಕಾರಿಯವರು ತಮ್ಮ ವರದಿಯಲ್ಲಿ ತೀರ್ಪು ನೀಡಿದ್ದಾರೆ.

ಮೇಲ್ಕಂಡ ವಿಚಾರಣಾಧಿಕಾರಿಗಳ ವರದಿ ಮತ್ತು ತತ್ಸಂಬಂಧ ವಾಸ್ತವಾಂಶಗಳನ್ನು ಪರಿಶೀಲಿಸಿದ ಶಿಸ್ತು ಪ್ರಾಧಿಕಾರವು ವಿಚಾರಣಾ ವರದಿಯನ್ನು ಒಪ್ಪಿಕೊಂಡು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 133 ಎಸ್ಇಎನ್ 02 ಬೆಂಗಳೂರು, ದಿನಾಂಕ: 27ನೇ ಏಪ್ರಿಲ್ 2006.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ ಶ್ರೀ ಬಿ.ಟಿ.ಪೆಮ್ಮಯ್ಯ, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಶ್ರೀ ಟಿ.ಸಿ.ಮುನಿಸ್ವಾಮಿ, ನಿವೃತ್ತ ವಿಭಾಗೀಯ ದೈಹಿಕ ಶಿಕ್ಷಣ ಅಧೀಕ್ಷಕರು, ಶ್ರೀ ಪ್ರಭು ಸೋನಾಳೆ, ಪತ್ರಾಂಕಿತ ಸಹಾಯಕರು, ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರ ಕಛೇರಿ, ಹಾಸನ ಶ್ರೀಮತಿ ಶೀಲಾ, ಪತ್ರಾಂಕಿತ ಮ್ಯಾನೇಜರ್, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಗುಂಡ್ಲುಪೇಟೆ, ಶ್ರೀಮತಿ ಎಂ.ಡಿ.ಶಾರದಾಂಬ, ಮ್ಯಾನೇಜರ್, ಸಹ ನಿರ್ದೇಶಕರವರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು, ಶ್ರೀ ಬಿ.ಶ್ರೀನಿವಾಸ, ಪ್ರಥಮ ದರ್ಜೆ ಸಹಾಯಕ, ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ಅವರುಗಳ ವಿರುದ್ಧ ದಿ:25.03.03 ಮತ್ತು 26.03.03ರ ನೋಟೀಸುಗಳಲ್ಲಿ ಮಾಡಲಾದ ದೋಷಾರೋಪಣೆಗಳಿಂದ ಸದರಿಯವರುಗಳನ್ನು ದೋಷಮುಕ್ತರನ್ನಾಗಿಸಿ ಆದೇಶಿಸುತ್ತದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಮೇಲಿನ ಆರೋಪಿತರುಗಳು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿದ್ದರೋ, ಅಂತಹ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಅವರು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ರಘುರಾಮ್ ಭಂಡಾರಿ**

ಪಿ.ಆರ್. 707

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಬೆಂಗಳೂರು ಮಹಾನಗರ ಪ್ರದೇಶದ 7 ನಗರಸಭೆಗಳು ಮತ್ತು 1 ಪುರಸಭೆಯ ವ್ಯಾಪ್ತಿಯಲ್ಲಿ ಬರುವ 600 ಚದರ ಅಡಿಗಳ ವರೆಗೆ ಪ್ರದೇಶ ಹೊಂದಿರುವ ಕೊಳಚೆ ಪ್ರದೇಶಗಳ ವ್ಯಾಖ್ಯಾಯನದಡಿಯಲ್ಲಿ ಸೇರಿರುವ ಬಡಜನರಿಗೂ ಸಹ ಫಲಾನುಭವಿಗಳ ವಂತಿಗೆಯನ್ನು ಕಟ್ಟುವುದರಿಂದ ವಿನಾಯಿತಿ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ.ನಅಇ 27 ಎಂಎನ್ಐ 2000, ದಿನಾಂಕ.26-12-03.
2) ಸರ್ಕಾರದ ಆದೇಶ ಸಂಖ್ಯೆ.ನಅಇ 36 ಎಂಎನ್ಐ 2004, ದಿನಾಂಕ.13-2-2004
3) ಸರ್ಕಾರದ ಆದೇಶ ಸಂಖ್ಯೆ.ನಅಇ 36 ಎಂಎನ್ಐ 2004, ದಿನಾಂಕ.26-3-2004.
4) ಸರ್ಕಾರದ ಆದೇಶ ಸಂಖ್ಯೆ.ನಅಇ 145 ಎಂಎನ್ಐ 2004, ದಿನಾಂಕ.28-2-05 ಮತ್ತು 9-3-2005.
5) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 18-1-2006ರಂದು ನಡೆದ ಯೋಜನಾ ಚಾಲನಾ ಸಮಿತಿಯ ಸಭೆಯ ನಡವಳಿಗಳು.

**ಪ್ರಸ್ತಾವನೆ:-**

ಮೇಲೆ (1)ರಲ್ಲಿ ಓದಲಾದ ದಿನಾಂಕ.26-12-2003ರ ಆದೇಶದಲ್ಲಿ ಬೆಂಗಳೂರು ಮಹಾನಗರ ಪ್ರದೇಶದಲ್ಲಿ ಬರುವ ಬೊಮ್ಮನಹಳ್ಳಿ, ಬ್ಯಾಟರಾಯನಪುರ, ದಾಸರಹಳ್ಳಿ, ಕೃಷ್ಣರಾಜಪುರಂ, ಮಹದೇವಪುರಂ, ರಾಜಾರಾಜೇಶ್ವರಿನಗರ ಮತ್ತು ಯಲಹಂಕ 7 ನಗರಸಭೆಗಳು ಮತ್ತು 1 ಕೆಂಗೇರಿ ಪುರಸಭೆಗೆ ರೂ.658.64 ಕೋಟಿ ಒಟ್ಟು ಅಂದಾಜು ವೆಚ್ಚದಲ್ಲಿ ನೀರು ಪೂರೈಕೆ ಹಾಗೂ

ಒಳಚರಂಡಿ ಯೋಜನೆಯನ್ನು ಅನುಷ್ಠಾನಗೊಳಿಸಲು ಮಂಜೂರಾತಿ ನೀಡಲಾಗಿದೆ. ಸದರಿ ಆದೇಶದಲ್ಲಿ ನಮೂದಿಸಿರುವಂತೆ ಯೋಜನೆಯಲ್ಲಿ ಪಾಲ್ಗೊಳ್ಳುವ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳು ಗೃಹ ಬಳಕೆದಾರರಿಂದ ಪ್ರತಿ ಸ್ವತ್ತಿಗೆ ರೂ.8,500/- ಮತ್ತು ಗೃಹೇತರ ಬಳಕೆದಾರರಿಂದ ಪ್ರತಿ ಸ್ವತ್ತಿಗೆ ರೂ.17,000/-ರಂತೆ ಒಂದು ಬಾರಿ ಬಂಡವಾಳ ವಂತಿಗೆಯನ್ನು ಸಂಗ್ರಹಿಸಲು ಸೂಚಿಸಲಾಗಿದೆ. ಈ ವಂತಿಗೆಯ ಮೊತ್ತವು ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಲಿಯು ವಿಧಿಸುವ ಮಾರ್ಗ ಮತ್ತು ಸಂಪರ್ಕ ವೆಚ್ಚ ಹಾಗೂ ಸ್ವತ್ತಿನ ಮಾಲೀಕರು ನಗರ ಸ್ಥಳೀಯ ಸಂಸ್ಥೆಗಳಿಗೆ ಸಂದಾಯ ಮಾಡಬೇಕಾದ ರಸ್ತೆ ಅಗೆಯುವ ವೆಚ್ಚಗಳು ಸೇರಿರುವುದಿಲ್ಲ.

ಮೇಲೆ (2) ಮತ್ತು (3) ರಲ್ಲಿ ಓದಲಾದ ದಿನಾಂಕ: 13-2-2004 ಮತ್ತು 26-3-2004 ಅದೇಶಗಳಲ್ಲಿ ಫಲಾನುಭವಿಗಳು ಬಂಡವಾಳ ವಂತಿಗೆಯ (BCC) ವಿನ್ಯಾಸವನ್ನು(structure) ಸರ್ಕಾರವು ನಿರ್ದಿಷ್ಟವಾಗಿ ತಿಳಿಸಿದೆ. 40ಕಿ x 60ಕಿರ ವಿನ್ಯಾಸದ ನಿವೇಶನಗಳಿಗೆ ಮತ್ತು 1200 ಚದರಡಿ ವರೆಗಿನ ವಸತಿ ಸಮುಚ್ಛಾಲಯಗಳಿಗೆ ರೂ.10,000/- ಮತ್ತು 40ಕಿ x 60ಕಿ ಅಳತೆ ಮೀರಿದ ನಿವೇಶನಗಳಿಗೆ ಹಾಗೂ 1200 ಚದರಡಿ ಮೀರಿದ ವಸತಿ ಸಮುಚ್ಛಾಲಯಗಳಿಗೆ ರೂ.15,000/- ಫಲಾನಭವಿ ಬಂಡವಾಳ ವಂತಿಗೆಯ ಸಂಗ್ರಹಣೆಯನ್ನು ನಿಗದಿಪಡಿಸಿದೆ. ಗೃಹೇತರ ಸ್ವತ್ತುಗಳು/ವಾಣಿಜ್ಯ ಸ್ವತ್ತುಗಳಿಗೆ ಸಂಬಂಧಿಸಿದಂತೆ ವಂತಿಗೆಯನ್ನು ರೂ.20,000/- ನಿಗದಿಪಡಿಸಿ ಸದರಿ ವಂತಿಗೆ ಸಂಗ್ರಹಣೆಗೆ ಕಡೇ ದಿನಾಂಕವನ್ನು 31-7-2004 ಎಂದು ಪ್ರಕಟಿಸಲಾಗಿತ್ತು. ಇದಾದ ನಂತರ ಹೆಚ್ಚುವರಿ 5000/- ಮೊತ್ತವನ್ನು ಪಾವತಿ ಮಾಡಬೇಕೆಂದು ಆದೇಶಿಸಿತ್ತು.

ಮೇಲೆ (5)ರಲ್ಲಿ ಓದಲಾದ ದಿನಾಂಕ.28-2-2005 ಮತ್ತು 9-3-2005ರ ಆದೇಶಗಳಲ್ಲಿ ಬೆಂಗಳೂರು ಮಹಾನಗರ ಪ್ರದೇಶದಲ್ಲಿ ಬರುವ ಬೊಮ್ಮನಹಳ್ಳಿ, ಬ್ಯಾಟರಾಯನಪುರ, ದಾಸರಹಳ್ಳಿ, ಕೃಷ್ಣರಾಜಪುರಂ, ಮಹದೇವಪುರ, ರಾಜಾರಾಜೇಶ್ವರಿನಗರ ಮತ್ತು ಯಲಹಂಕ 7 ನಗರಸಭೆಗಳು ಮತ್ತು 1 ಕೆಂಗೇರಿ ಪುರಸಭೆ ಪ್ರದೇಶಗಳಲ್ಲಿ ಬರುವ ವಿವಿಧ ಮಾದರಿಯ ಆಸ್ತಿಗಳಿಗೆ ಫಲಾನುಭವಿಗಳಿಂದ ಬಂಡವಾಳ ವಂತಿಕೆ(ಬಿ.ಸಿ.ಸಿ) ಸಂಗ್ರಹಣೆ ಕುರಿತು ಪರಿಷ್ಕೃತ ವಿನ್ಯಾಸಕ್ಕೆ ಸರ್ಕಾರವು ಅನುಮೋದನೆ ನೀಡಿ, ಬಂಡವಾಳ ವಂತಿಗೆಯನ್ನು ಸಂಗ್ರಹಿಸುವ ದಿನಾಂಕವನ್ನು 31ನೇ ಜುಲೈ 2005ರವರೆಗೆ ವಿಸ್ತರಿಸಿ ಆದೇಶಿಸಲಾಗಿತ್ತು.

ಮೇಲೆ (6)ರಲ್ಲಿ ಓದಲಾದ ದಿನಾಂಕ.18-1-2006ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ GBWASP ಯೋಜನಾ ಚಾಲನಾ ಸಮಿತಿಯ ಸಭೆಯ ನಡವಳಿಗಳಲ್ಲಿ 600ಚದರ ಅಡಿಗಳವರೆಗೆ ಪ್ರದೇಶ ಹೊಂದಿರುವ ಕೊಳಚೆ ಪ್ರದೇಶಗಳ ವ್ಯಾಖ್ಯಾಯನದಡಿಯಲ್ಲಿ ಸೇರದಿರುವ ಹಲವಾರು ನಿವಾಸಿಗಳು ಫಲಾನುಭವಿಗಳ ವಂತಿಗೆಯನ್ನು ನೀಡಬೇಕಾಗುತ್ತದೆ. ಈ ನಿವಾಸಿಗಳು ಬಡಜನರ ವರ್ಗದಡಿಯಲ್ಲಿ ಸಹ ಬರುವುದರಿಂದ ಕೊಳಚೆ ಪ್ರದೇಶಗಳ ನಿವಾಸಿಗಳಾಗಿ ಅವರನ್ನೂ ಸಹ ಫಲಾನುಭವಿಗಳ ವಂತಿಗೆಯನ್ನು ಕಟ್ಟುವುದರಿಂದ ವಿನಾಯಿತಿ ನೀಡಲು ಕಾರ್ಯಕಾರಿ ತಂಡವು (working group) ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ 600 ಚದರ ಅಡಿಗಳನ್ನೊಳಗೊಂಡ ನಿವೇಶನಗಳ ಮೇಲೆ ಇರುವಂತಹ ಮನೆಗಳಿಂದ ಮೂಲ ವಂತಿಗೆ ಪಡೆಯುವುದನ್ನು ನಿಲ್ಲಿಸಲು ತೀರ್ಮಾನಿಸಿ, ಈಗಾಗಲೇ ಇಂತಹ ಕೆಲವು ನಿವೇಶನದಾರರು ವಂತಿಗೆಯನ್ನು ಕಟ್ಟಿದ್ದರೆ ಅಂತಹವರನ್ನು ಗುರುತಿಸಿ ಅಂತಹ ಮೊತ್ತವನ್ನು ಮುಂದಿನ ಬಿಲ್ಲುಗಳು ಹಾಗೂ ಸಂಪರ್ಕ ವೆಚ್ಚದ ಕಡೆ ಹೊಂದಾಣಿಕೆ ಮಾಡಬಹುದೆಂದು ಅಥವಾ ಅಂತಹ ಮೊತ್ತವನ್ನು ಹಿಂಬರಿಸಬಹುದೆಂದು ಹಾಗೂ ಬೇರೆ ವರ್ಗದವರ ವಂತಿಗೆಯನ್ನು ಮುಂದುವರಿಸಲು ತೀರ್ಮಾನಿಸಲಾಗಿದೆ. ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: 162 ಎಂಎನ್ಐ 2005 (P) ಬೆಂಗಳೂರು, ದಿನಾಂಕ: 25ನೇ ಮಾರ್ಚ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಗಣಿಸಿ ಸರ್ಕಾರಿ ಆದೇಶ ಸಂಖ್ಯೆ 145 ಎಂಎನ್ಐ 2004 ದಿನಾಂಕ: 28-2-2005ರ ಆದೇಶದಲ್ಲಿ ಬೆಂಗಳೂರು ಮಹಾನಗರ ಪ್ರದೇಶದ ವ್ಯಾಪ್ತಿಯಲ್ಲಿ ಬರುವ, ಬೊಮ್ಮನಹಳ್ಳಿ, ಬ್ಯಾಟರಾಯನಪುರ, ದಾಸರಹಳ್ಳಿ, ಕೃಷ್ಣರಾಜಪುರ, ಮಹದೇವಪುರ, ರಾಜರಾಜೇಶ್ವರಿನಗರ ಮತ್ತು ಯಲಹಂಕ 7 ನಗರ ಸಭೆಗಳು ಮತ್ತು 1 ಕೆಂಗೇರಿ ಪುರಸಭೆಯ ವ್ಯಾಪ್ತಿಯಲ್ಲಿ ಬರುವ 600 ಚದರ ಅಡಿ ವಿಸ್ತೀರ್ಣವುಳ್ಳ ನಿವೇಶನಗಳಲ್ಲಿ ಇರುವಂತಹ ಮನೆಗಳಿಂದ ಬಳಕೆದಾರರಿಂದ ಸಂಗ್ರಹಿಸಬೇಕಾದ ವಂತಿಕೆಯಿಂದ ವಿನಾಯಿತಿ ನೀಡಲಾಗಿದೆ. ಈಗಾಗಲೇ ಕೆಲವು ನಿವೇಶನದಾರರು ವಂತಿಗೆಯನ್ನು ಕಟ್ಟಿದ್ದರೆ ಅಂಥಹವರನ್ನು ಗುರುತಿಸಿ, ಅಂಥಹ ವಂತಿಗೆ ಮೊತ್ತವನ್ನು ಮುಂದಿನ ಬಿಲ್ಲುಗಳಿಗೆ ಹಾಗೂ ಸಂಪರ್ಕ ವೆಚ್ಚಕ್ಕೆ ಹೊಂದಾಣಿಕೆ ಮಾಡಿಕೊಳ್ಳಬಹುದು ಅಥವಾ ಆ ಮೊತ್ತವನ್ನು ಹಿಂಬರಿಸಬಹುದು. ಉಳಿದಂತೆ ಮೇಲಿನ ಸರ್ಕಾರಿ ಆದೇಶ ಸಂಖ್ಯೆ 145 ಎಂಎನ್ಐ 2004 ದಿನಾಂಕ:28-2-2005ರಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವ್ಹಿ.ಆರ್. ಇಲಕಲ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

ಪಿ.ಆರ್. 610

## URBAN DEVELOPMENT SECRETARIAT

**Sub:** Implementation of Water Supply & Sewerage Project for seven CMC's and one TMC around the Bangalore Mahanagara Palike Area- Sanction for engagement of services of Water and Sanitation for Urban Poor Organisation, U.K. for developing models for delivery of water and sanitation services- reg.

**Read:** 1) Government Order No. UDD 27 MNI 2000 dated:26.12.2003.
2) Government Order No. UDD 56 PRJ 2005 dated:13.9.2005.

**PREAMBLE:-**

In Govt.Order dated: 26-12-2003 read at (1) above, sanction has been accorded for implementation of the water supply and sewerage project for seven City Municipal Councils and one TMC around the Bangalore Mahanagara Palike Viz., CMCs of Bommanhally, Byatarayanapura,

Dasarahalli, Krishnarajapuram, Mahadevapura, Rajarajeshwarinagar and Yelahanka and Town Municipal Council of Kengeri at an estimated cost of Rs.658.65 Crores (Water Supply Project Rs.340.55 Crores, Sewerage Project 3.18.10 Crores). The Project is to be implemented by the BWSSB. The water supply component has already been taken up for implementation by the BWSSB on behalf of the 8 Urban Local Bodies (ULB) and the sanitation project will be taken up with assistance of work under the Karnataka Municipal Reforms Project (KMRP) approved by the Government, vide Government Order dated:13-9-2005 read at 2 above.

2. One of the objects in the project is to ensure that the urban poor which consists of slum population and lower income households in these ULB areas are covered under the project, and are ensured equitable distribution of water and sanitation facilities. There are 106 slums in these ULBs.

3. Even though water supply and sanitation services are extended to cover the slums, there is a gap in the delivery services at the grass root level. Therefore, steps need to be taken in order to ensure delivery of these services on a sustainable basis and in order to bring a change in the quality of life of slum dwellers. In this connection, it is felt that the involvement of an NGO with experience in the field would be useful. In the past, BWSSB has had a successful (similar) arrangement with the Australian Agency for International Development (AUSAID) during 2000 to improve the capacity of BWSSB in the delivery of water supply and sanitation services in 3 identified slums in Bangalore City.

4. A voluntary organisation by the name of Water and Sanitation for the Urban Poor (WSUP), U.K, which is a non-profit Company set up in U.K has approached the Bangalore Water Supply & Sewerage Board with a proposal to extend their services for improving water and sanitation services including health education to the slums in the 8 ULB Project areas. After discussions with WSUP, it is decided that one cluster could be taken up in the 8 ULBs Project area, to be identified. The objective is to demonstrate 100% successful coverage in an identified slum towards water as well as sanitation on a sustainable basis. WSUP will establish their presence for this purpose as long as it is required in the chosen area.

5. The cost towards technical assistance and other initiatives covering soft components would be completely met by the WSUP. In case of infrastructure within the slum area, if any gaps are identified to exist between the projects under implementation and the models proposed by WSUP, then the investments that may become necessary in the pilot slum will be sourced from other donors which WSUP will facilitate.

6. However, after successful demonstration, if the model needs to be scaled up to other slums in the project area, such investment will be met within the project cost. The BWSSB, Director of Municipal Administration (DMA) and the Karnataka Urban Infrastructure Development Finance & Corporation (KUIDFC) will facilitate the work of WSUP in order to meet the objective of this task.

7. Government have examined the proposal of WSUP, U.K. It does not include any expenditure to be incurred either by the BWSSB or Government. Hence the following order.

**GOVERNMENT ORDER NO.UDD 35 MNI 2006, BANGALORE, DATED: 20th APRIL 2006**

In the above circumstances, Government of Karnataka are pleased to accord approval to accept the proposal of Water & Sanitation for Urban Poor (WSUP) U.K and to engage their services for developing models for improving water and sanitation services, under the Water & Sewerage Project, which is being implemented by the BWSSB, on a sustainable basis.

Any clearance required from Government of India shall be obtained before formally permitting the above voluntary organisation to start the work.

Government of Karnataka will also reserve the right to withdraw this permission at any time.

By Order and in the name of the Governor of Karnataka,

**V.R. ILKAL**

P.R. 668 Under Secretary to Government, Urban Development Department

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ವಿಷಯ:** ಶ್ರೀ ಹೆಚ್.ಎಸ್.ಶೇಖರಪ್ಪ, ಪರಿವೀಕ್ಷಣಾಧಿಕಾರಿ ದರ್ಜೆ-1 ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರನ್ನು ಸಹಾಯಕ ವ್ಯವಸ್ಥಾಪಕರು (ಮಾರುಕಟ್ಟೆ) ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ಬೆಂಗಳೂರು ಹುದ್ದೆಗೆ ನಿಯೋಜಿಸಿರುವ ಷರತ್ತು ಮತ್ತು ನಿಬಂಧನೆಗಳನ್ನು ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಬೆಂಗಳೂರು ಇವರ ಆದೇಶ ಸಂಖ್ಯೆ:ಮಮಅಇ: ನಿಸಿಗೆ:ವರ್ಗಾವಣೆ:2005-06 ದಿ:7-7-2005(ಪುಟ-5-2)

**ಸರ್ಕಾರಿ ಆದೇಶ ಸಂಖ್ಯೆ: ಮಮಇ 56 ಎಸ್‌ಜೆಡಿ 2006 ಬೆಂಗಳೂರು ದಿನಾಂಕ: 15ನೇ ಮೇ 2006**

ಪರಿವೀಕ್ಷಣಾಧಿಕಾರಿ, ದರ್ಜೆ-1, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರನ್ನು ಮೇಲೆ(2) ರಲ್ಲಿ ಓದಲಾದ ಆದೇಶದಲ್ಲಿ ಸಹಾಯಕ ವ್ಯವಸ್ಥಾಪಕರು(ಮಾರುಕಟ್ಟೆ) ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ಹುದ್ದೆಗೆ ನಿಯೋಜಿಸಿದ್ದು, ನಿಯೋಜನಾ ಷರತ್ತು ಮತ್ತು ನಿಬಂಧನೆಗಳು ಈ ಕೆಳಗೆ ಸೂಚಿಸಿದಂತೆ ಇರುತ್ತವೆ.

**1) ನಿಯೋಜನೆಯ ಅವಧಿ**

ಅನ್ಯಸೇವೆಯ ಮೇಲಿನ ನಿಯೋಜನೆಯ ಪ್ರಾರಂಭಿಕ ಅವಧಿಯು ದಿನಾಂಕ: 29-6-2005 ರಿಂದ 2 ವರ್ಷದವರೆಗೆ ಅಥವಾ ಮುಂದಿನ ಆದೇಶ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

**2) ಅನ್ಯಸೇವೆಯ ಮೇಲಿನ ನಿಯೋಜನೆಯ ಪ್ರಾರಂಭ ಮತ್ತು ಮುಕ್ತಾಯದ ಅವಧಿ:**

ಅನ್ಯಸೇವೆಯ ಮೇಲಿನ ನಿಯೋಜನೆಯ ಅವಧಿಯು ಅಧಿಕಾರಿಯವರ ಹುದ್ದೆಯ ಕಾರ್ಯಭಾರವನ್ನು ವಹಿಸಿಕೊಂಡ ದಿನಾಂಕದಿಂದ ಪ್ರಾರಂಭವಾಗುವುದು ಮತ್ತು ನಿಯೋಜನಾವಧಿ ಅಂತ್ಯಗೊಂಡು ನೇಮಕ ಮಾಡಿದ ಹುದ್ದೆಯ ಕಾರ್ಯಭಾರ ವಹಿಸಿಕೊಟ್ಟ ದಿನಾಂಕದಿಂದ ಮುಕ್ತಾಯಗೊಳ್ಳುವುದು.

**3) ವೇತನ:**

ಅನ್ಯಸೇವೆಯ ಮೇಲಿನ ನಿಯೋಜನೆಯ ಅವಧಿಯಲ್ಲಿ ಇವರು ಮಾತೃ ಇಲಾಖೆಯಲ್ಲಿ ಹೊಂದಿರುವ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯಲ್ಲಿ ವೇತನವನ್ನು ಪಡೆಯುತ್ತಾರೆ ಮತ್ತು 200ರೂ.ಗಳ ಗರಿಷ್ಠ ಮಿತಿಗೊಳಪಟ್ಟು, ಆ ವೇತನ ಶ್ರೇಣಿಯ ಸರಾಸರಿಯ ಶೇ.5ರ ದರದಲ್ಲಿ ಅನ್ಯಸೇವಾ ಭತ್ಯೆಯನ್ನು (ಎಫ್.ಎಸ್.ಎ) ಸಹ ಪಡೆಯುತ್ತಾರೆ.

**4) ತುಟ್ಟಿ ಭತ್ಯೆ:**

ಮನೆ ಬಾಡಿಗೆ ಭತ್ಯೆ: ನಗರ ಪರಿಹಾರ ಭತ್ಯೆ ಪಾವತಿಯು ರಾಜ್ಯ ಸರ್ಕಾರದ ನಿಯಮಗಳಡಿಯಲ್ಲಿ ನಿಬಂಧಿಸಲಾಗುವುದು.

**5) ಸೇರುವ ಕಾಲ:**

ಸೇರುವ ಕಾಲದ ವೇತನ ಮತ್ತು ವರ್ಗಾವಣೆ ಪ್ರಯಾಣ ಭತ್ಯೆ ಇವುಗಳನ್ನು ನಿಯೋಜನೆ ಮೇಲೆ ಹೋಗುವಾಗ ಮತ್ತು ಅಲ್ಲಿಂದ ಹಿಂದಿರುಗುವಾಗ ರಾಜ್ಯ ಸರ್ಕಾರ ನಿಯಮಗಳ ಆದೇಶಗಳಡಿಯಲ್ಲಿ ಕ್ರಮಗೊಳಿಸಲಾಗುವುದು ಮತ್ತು ಇವುಗಳನ್ನು ನಿಯೋಜಕರು ಪಾವತಿ ಮಾಡತಕ್ಕದ್ದು.

**6) ಪ್ರಯಾಣ ಭತ್ಯೆ:**

ನಿಯೋಜನೆ ಮೇಲೆ ಅನ್ಯಸೇವೆಗೆ ಸೇರಿದ ನಂತರ ಕೈಗೊಂಡ ಪ್ರಯಾಣಗಳಿಗೆ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ನಿಯೋಜಕರಲ್ಲಿನ ಸಂಬಂಧಿತ ನಿಯಮಗಳ ಪ್ರಕಾರ ಪಡೆಯಲು ಅಧಿಕಾರಿ ಅರ್ಹರಾಗಿರುತ್ತಾರೆ.

**7) ರಜೆ ನಿಯಮಗಳು:-**

ರಾಜ್ಯ ಸರ್ಕಾರದಲ್ಲಿ ಅಧಿಕಾರಿಗೆ ಅನ್ವಯವಾಗುವ ರಜಾ ನಿಯಮಗಳಿಗೆ ಒಳಪಟ್ಟಿರುತ್ತಾರೆ.

**8) ರಜೆ ಪ್ರಯಾಣ ರಿಯಾಯಿತಿ:**

ರಾಜ್ಯ ಸರ್ಕಾರದಲ್ಲಿನ ಸಂಬಂಧಿತ ನಿಯಮಗಳ ಪ್ರಕಾರ ಸ್ವಗ್ರಾಮ ಪ್ರಯಾಣಕ್ಕೆ ರಜೆ ಪ್ರಯಾಣ ರಿಯಾಯಿತಿಯನ್ನು ಪಡೆಯಲು ಅಧಿಕಾರಿಯು ಅರ್ಹರಾಗಿರುತ್ತಾರೆ.

**9) ಗಳಿಕೆ ರಜೆ ನಗದೀಕರಣ:-**

ಕರ್ನಾಟಕ ನಾಗರೀಕರ ಸೇವಾ ನಿಯಮಗಳ 'ಸಿ' ಅನುಬಂಧದಲ್ಲಿರುವ ನಿಯಮಗಳ ಪ್ರಕಾರ ಗಳಿಕೆ ರಜೆ ನಗದೀಕರಣ ಸೌಲಭ್ಯಕ್ಕೆ ಅಧಿಕಾರಿ ಅರ್ಹರಾಗಿರುತ್ತಾರೆ.

**10) ವೈದ್ಯಕೀಯ ರಿಯಾಯಿತಿಗಳು:-**

1963ರ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಉಪಚಾರ)ನಿಯಮಗಳಲ್ಲಿ ಲಭ್ಯವಿರುವ ವೈದ್ಯಕೀಯ ಸೌಲಭ್ಯಗಳಿಗೆ ಕಡಿಮೆಯಿಲ್ಲದಂತೆ ಸೌಲಭ್ಯಗಳನ್ನು ಪಡೆಯಲು ಅಧಿಕಾರಿಯು ಅರ್ಹರಾಗಿರುತ್ತಾರೆ ಮತ್ತು ಅದರ ಬಾಬ್ತಿನ ವೆಚ್ಚವನ್ನು ನಿಯೋಜಕರೇ ಭರಿಸತಕ್ಕದ್ದು.

**11) ದುರ್ಬಲತೆ ರಜೆ:-**

ನಿಯೋಜಕರ ಬಳಿ ಸೇವೆಯಲ್ಲಿರುವಾಗ ಅಥವಾ ಸೇವೆಯ ಮೂಲಕ ಸಂಭವಿಸುವ ದುರ್ಬಲತೆಗೆ ಸಂಬಂಧಿಸಿದಂತೆ ಮಂಜೂರಾದ ದುರ್ಬಲತೆ ರಜೆಗೆ ಇಂತಹ ದುರ್ಬತೆಯು ನಿಯೋಜಕರ ಬಳಿಯಲ್ಲಿನ ಸೇವೆಯು ಕೊನೆಗೊಂಡ ನಂತರ ಕಂಡುಬಂದರೂ ಸಂಬಂಧಿಸಿದ ರಜೆ ವೇತನವನ್ನು ಪಾವತಿ ಮಾಡಲು ಅನ್ಯನಿಯೋಜಕರು ಬದ್ಧರಾಗಿರುತ್ತಾರೆ.

**12) ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನ:-**

(ಅ) ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನವನ್ನು ನಿಯೋಜಕರು ಈ ಮುಂದಿನ ದರಗಳಲ್ಲಿ ಪಾವತಿ ಮಾಡತಕ್ಕದ್ದು.

| | |
|---|---|
| (1) ರಜೆ ವೇತನ ಅಂಶದಾನ: | ಅನ್ಯಸೇವೆಯ ಅವಧಿಯಲ್ಲಿ ಅನ್ಯಸೇವಾ ಭತ್ಯೆಯೂ ಸೇರಿದಂತೆ, ಪಡೆಯುವ ಸಂಬಳದ ಶೇ 11 ರಷ್ಟು. |
| (2) ನಿವೃತ್ತಿ ವೇತನ ಅಂಶದಾನ: | ಕಾಲ ಕಾಲಕ್ಕೆ ಪಡೆಯುವ ವೇತನದ 8ನೇ ಒಂದು ಭಾಗ ಉದ್ದೇಶಕ್ಕೆ ವೇತನ-ಎಂದರೆ ಸರ್ಕಾರಿ ಆದೇಶ ಸಂ.ಎಫ್‌ಡಿ 37 ಎಸ್‌ಆರ್‌ಎಸ್ 87, ದಿನಾಂಕ:11-2-88ರಲ್ಲಿ ವಿವರಿಸಲಾದ ವೇತನ ಎಂದರ್ಥ. |

ಅ) ನಿಯೋಜಕರು ವಾರ್ಷಿಕವಾಗಿ ಪ್ರತಿ ಆರ್ಥಿಕ ವರ್ಷ ಕೊನೆಗೊಂಡ 15 ದಿನಗಳೊಳಗೆ ಅಥವಾ ಆರ್ಥಿಕ ವರ್ಷ ಕೊನೆಗೊಳ್ಳುವ ಮುನ್ನವೇ ಅನ್ಯಸೇವೆಯು ಮುಗಿದು ಹೋದಂದಿನಿಂದ ರಜೆಯ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳನ್ನು ಪ್ರತ್ಯೇಕವಾಗಿ ಈ ಮುಂದಿನ ಲೆಕ್ಕ ಶೀರ್ಷಿಕೆಗಳಿಗೆ ಸಂದಾಯ ಮಾಡತಕ್ಕದ್ದು.

| | | |
|---|---|---|
| ಆ) ರಜೆ ವೇತನ | 1) ಅಖಿಲ ಭಾರತ ಸೇವೆಯ ಅಧಿಕಾರಿಗಳ ಪ್ರಕರಣದಲ್ಲಿ | 0070 ಇತರೆ ಆಡಳಿತ ಸೇವೆಗಳು 800–60–ಇತರೆ ಸೇವೆಗಳು ಇತರೆ ಜಮೆಗಳು 13 ಅಖಿಲ ಭಾರತ ಸೇವೆಯ ಅಧಿಕಾರಿಗಳಿಗೆ ಸಂಬಂಧಿಸಿದ ರಜೆ ವೇತನ ಅಂಶದಾನ |
| | 2) ಇತರ ಪ್ರಕರಣದಲ್ಲಿ | |
| ಎ) | ಕೃತ್ಯ ಸಂಬಂಧದ ಜಮೆ ಶೀರ್ಷಿಕೆ ಇದ್ದಲ್ಲಿ | ಸಿಬ್ಬಂದಿಗೆ ಅನ್ವಯಿಸುವ ವೆಚ್ಚ ಶೀರ್ಷಿಕೆಗೆ ಅನುಗುಣವಾದ ಕೃತ್ಯ |
| ಬಿ) | ಸರಿಹೊಂದುವ ಜಮೆ ಶೀರ್ಷಿಕೆ ಇಲ್ಲದೇ ಹೋದಲ್ಲಿ | ಸಂಬಂಧದ ಶೀರ್ಷಿಕೆ 800 ಇತರೆ ಜಮೆಗಳು –ರಜೆ ವೇತನದ ಅಂಶದಾನ |
| | 1)ಸಾಮಾನ್ಯ ಸೇವೆಗಳು ಇದರಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ | 0075 ಇತರೆ ಸಾಮಾನ್ಯ ಸೇವೆಗಳು 800 ಇತರೆ ಜಮೆಗಳು–ರಜೆ ವೇತನ ಅಂಶದಾನ |
| | 2)ಸಾಮಾನ್ಯ ಮತ್ತು ಸಾಮುದಾಯಿಕ ಸೇವೆಗಳು ಇದರಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ | 0250 ಇತರೆ ಸಾಮಾಜಿಕ ಸೇವೆಗಳು–800 ಇತರೆ ಜಮೆಗಳು ರಜೆ ವೇತನ ಅಂಶದಾನ |
| | 3)ಆರ್ಥಿಕ ಸೇವೆಗಳು ಇದರಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ | 1475 ಇತರೆ ಸಾಮಾನ್ಯ ಆರ್ಥಿಕ ಸೇವೆ ಗಳು–800 ಇತರೆ ಜಮೆಗಳು ರಜೆ ವೇತನದ ಅಂಶದಾನ. |
| ಸಿ) | ನಿವೃತ್ತಿ ವೇತನ ಅಂಶದಾನ | 0071 ನಿವೃತ್ತಿ ವೇತನ ಮತ್ತು ಇತರ ನಿವೃತ್ತಿ ಸೌಲಭ್ಯಗಳ ಅಂಶದಾನ ಮತ್ತು ವಸೂಲಿಗಳು 101.ಚಂದಾಗಳು ಮತ್ತು ಅಂಶದಾನಗಳು– 03.ನಿವೃತ್ತಿ ವೇತನ ವೆಚ್ಚದ ಬಗ್ಗೆ ವಾಣಿಜ್ಯ ಇಲಾಖೆಗಳಿಂದ ವಸೂಲು ಮಾಡಲಾದ ಅಂಶದಾನ ಅಥವಾ 06 ನಿವೃತ್ತ ವೇತನದ ವೆಚ್ಚದ ಸಲುವಾಗಿ ಸ್ಥಳೀಯ ಸಂಸ್ಥೆಗಳಿಂದ ವಸೂಲು ಮಾಡಿದ ಅಂಶದಾನ. |

(ಡಿ) ಮೇಲಿನ ಅವಧಿಯೊಳಗೆ ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳನ್ನು ಪಾವತಿ ಮಾಡದಿದ್ದರೆ, ಸರ್ಕಾರ ವಿಶೇಷವಾಗಿ ವಿನಾಯಿತಿ ತೋರಿಸಿದ ಹೊರತು, ಪಾವತಿ ಮಾಡದಿರುವ ಅಂಶದಾನದ ಮೇಲೆ, ಮೇಲಿನ ಅವಧಿಯು ಮುಕ್ತಾಯಗೊಂಡ ದಿನಾಂಕದಿಂದ ಅಂಶದಾನವನ್ನು ಅಂತಿಮವಾಗಿ ಪಾವತಿ ಮಾಡುವ ದಿನಾಂಕದವರೆಗೆ ಪ್ರತಿ 100 ರೂ.ಗಳಿಗೆ ದಿನಂಪ್ರತಿ 2 ಪೈಸೆ ದರದಲ್ಲಿ ಬಡ್ಡಿಯನ್ನು ನಿಯೋಜಕರು ಸರ್ಕಾರಕ್ಕೆ ಪಾವತಿ ಮಾಡತಕ್ಕದ್ದು.

(ಈ) ರಜೆ ವೇತನ ಮತ್ತು ನಿವೃತ್ತಿ ವೇತನ ವಂತಿಕೆಗಳನ್ನು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ಬೆಂಗಳೂರು– ಇವರಿಂದ ಮಹಾಲೇಖಪಾಲರು(ಎ ಅಂಡ್ ಇ) ಕರ್ನಾಟಕ, ಬೆಂಗಳೂರು. ಇವರಿಗೆ ತಪ್ಪದೇ ಕ್ರಾಸ್ ಮಾಡಿದ ಚೆಕ್: ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಪಾವತಿ ಮಾಡತಕ್ಕದ್ದು, ಮತ್ತು ಅದನ್ನು ನಗದು ರೂಪದಲ್ಲಿ ಸಂದಾಯ ಮಾಡತಕ್ಕದ್ದು ಮತ್ತು ಅದನ್ನು ನಗದು ರೂಪದಲ್ಲಿ ಸಂದಾಯ ಮಾಡತಕ್ಕದ್ದಲ್ಲ. ಅಂತಹ ನಗದು ರೂಪದಲ್ಲಿ ಸಂದಾಯ ಚೆಕ್: ಡಿಮ್ಯಾಂಡ್ ಡ್ರಾಫ್ಟ್ ಮಹಾಲೇಖಪಾಲರ ಕಛೇರಿಯಲ್ಲಿ ಸ್ವೀಕೃತವಾದ ದಿನಾಂಕವನ್ನು ವಂತಿಕೆಯ ಹೊಣೆಯಿಂದ ವಿಮುಕ್ತಿ ಪಡೆದ ದಿನಾಂಕವೆಂದು ಪರಿಗಣಿಸತಕ್ಕದಾದ್ದರಿಂದ, ಚೆಕ್ :ಡಿಮ್ಯಾಂಡ್ ಡ್ರಾಫ್ಟ್‌ನ್ನು ನಿಗದಿಪಡಿಸಿದ ದಿನಾಂಕದೊಳಗಾಗಿ ಮಹಾಲೇಖಪಾಲರ ಕಛೇರಿ (ಎ ಅಂಡ್ ಇ) ಕರ್ನಾಟಕ, ಬೆಂಗಳೂರು ಇವರಿಗೆ ತಲುಪುವಂತೆ ಕಳುಹಿಸತಕ್ಕದ್ದು.

(ಎಫ್) ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳ ವಂತಿಕೆ ಮತ್ತು ಅವುಗಳ ಮೇಲೆ ಬಡ್ಡಿಯಿದ್ದರೆ, ಅಂತಹ ಬಡ್ಡಿಗಳನ್ನು ಅತ್ಯಂತ ದತ್ತಿದರ ರೂಪಾಯಿಗೆ ಸರಿಹೊಂದಿಸತಕ್ಕದ್ದು.

**(13) ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆ:–** ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆಗೆ ಸಂಬಂಧಿಸಿದ ಮಾಸಿಕ ವಂತಿಕೆಯನ್ನು ಅಧಿಕಾರಿಯವರ ವೇತನದಿಂದ ವಸೂಲು ಮಾಡಲು ಮತ್ತು ಅದನ್ನು 1981ರ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆಯ ಅನುಬಂಧ–ಎ ದಲ್ಲಿನ ಅನುಸೂಚಿಯೊಂದಿಗೆ ಇಲಾಖಾ ಮುಖ್ಯಸ್ಥರ ಹೆಸರಿಗೆ ಕ್ರಾಸ್ ಮಾಡಿದ ಚೆಕ್; ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಸಂಬಂಧಿತ ಲೆಕ್ಕ ಶೀರ್ಷಿಕೆಗೆ ಜಮಾ ಮಾಡಲು ಕಳುಹಿಸತಕ್ಕದ್ದು.

**14) ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯ ವಿಮಾ ಪತ್ರ:–** ಸಾಮಾನ್ಯ ಭವಿಷ್ಯ ನಿಧಿಗೆ ಚಂದಾ ಅನ್ಯಸೇವೆಯ ಮೇಲೆ ಪ್ರತಿ ನಿಯೋಜನೆ ಹೋಗುವ ಸಮಯದಲ್ಲಿ ಕೆ.ಜಿ.ಐ.ಡಿ ನಿಯಮಾವಳಿ: ಜಿ.ಪಿ.ಎಫ್. ನಿಯಮಾವಳಿ ಪ್ರಕಾರ ಚಂದಾ ನೀಡುತ್ತಿದ್ದ ಕೆ.ಜಿ.ಐ.ಡಿ : ಜಿ.ಪಿ.ಎಫ್. ನಲ್ಲಿನ ವಿಮಾ ಪತ್ರಗಳಿಗೆ ಚಂದಾ ನೀಡುವುದನ್ನು ಅಧಿಕಾರಿ ಮುಂದುವರೆಸುತ್ತಾರೆ. ಅಧಿಕಾರಿಯವರ ಸಂಬಳದಿಂದ ಚಂದಾಗಳನ್ನು ವಸೂಲು ಮಾಡತಕ್ಕದ್ದು ಮತ್ತು ಈ ಮುಂದಿನ ಲೆಕ್ಕ ಶೀರ್ಷಿಕೆಗಳಿಗೆ ಜಮಾ ಮಾಡತಕ್ಕದ್ದು.

ಸಾಮಾನ್ಯ ಭವಿಷ್ಯ ನಿಧಿ : 8005.ರಾಜ್ಯ ಭವಿಷ್ಯ ನಿಧಿ

ಕರ್ನಾಟಕ ಸರ್ಕಾರಿ ವಿಮಾ ಇಲಾಖೆ : 8011 ವಿಮೆ ಮತ್ತು ನಿವೃತ್ತಿ ವೇತನ ನಿಧಿಗಳು–1 ಜಮೆ ನಿಧಿಗಳು.

**15) ಬೋನಸ್ ಅಥವಾ ಅನುಗ್ರಹ ಕೊಡುಗೆ ಪಾವತಿ:–**

ಸರ್ಕಾರಿ ಕಂಪನಿ, ಮಂಡಳಿ, ನಿಗಮ ಇತ್ಯಾದಿಗಳಿಗೆ ನಿಯೋಜಕರಾಗಿ ಮಾಸಿಕ ಎರಡು ಸಾವಿರದ ಐದುನೂರು ರೂಪಾಯಿಗಳಿಗೆ ಮೀರದೆ ಸಂಬಳವನ್ನು ಪಡೆಯುತ್ತಿರುವ ಅಧಿಕಾರಿಗೆ ಉದ್ದಿಮೆಯು 1965 ರ ಬೋನಸ್ ಸಂದಾಯ ಅಧಿನಿಯಮಗಳ ಪ್ರಕಾರ ಅನುಗ್ರಹ ಕೊಡುಗೆ ನೀಡಿದಲ್ಲಿ ಬೋನಸ್ ಅಥವಾ ಅನುಗ್ರಹ ಕೊಡುಗೆಯನ್ನು ಪಡೆಯಲು ಅನುಮತಿಸತಕ್ಕದ್ದು.

**16) ಬಡ್ತಿ ಅಥವಾ ವರ್ಗಾವಣೆ ಅಥವಾ ಪ್ರಭಾರ:–**

ಅಧಿಕಾರಿಯವರಿಗೆ ಬಡ್ತಿ ನೀಡುವುದು ಅಥವಾ ವರ್ಗಾವಣೆ ಮಾಡುವುದು ಅಥವಾ ಹೆಚ್ಚುವರಿ ಕಾರ್ಯಭಾರವನ್ನು ವಹಿಸುವುದು ಅಥವಾ ಹೆಚ್ಚುವರಿ ಸಂಭಾವನೆಯನ್ನು ನೀಡುವುದು ಅಥವಾ ಸೌಲಭ್ಯವನ್ನು ಒದಗಿಸುವುದು ಇವುಗಳನ್ನು ಸರ್ಕಾರದ ಪೂರ್ವಾನುಮತಿ ಪಡೆಯದೆ ಮಾಡತಕ್ಕದ್ದಲ್ಲ.

**17) ಗೃಹ ನಿರ್ಮಾಣ ಮುಂಗಡ: ಗೃಹ ಖರೀದಿ ಮುಂಗಡ :ಗೃಹ ರಿಪೇರಿ ಮುಂಗಡ ಮತ್ತು ವಾಹನ ಖರೀದಿ ಮುಂಗಡ:–**

ನಿಯೋಜಕರು, ಪ್ರಸ್ತುತ, ಮುಂಗಡಗಳನ್ನು ಅಧಿಕಾರಿಯವರಿಗೆ ಮಂಜೂರು ಮಾಡತಕ್ಕದ್ದಲ್ಲ. ಈ ಮುಂಗಡಗಳ ಮಂಜೂರಾತಿಗಾಗಿ ಅಧಿಕಾರಿಯವರು ಆಡಳಿತಾತ್ಮಕ ಇಲಾಖೆಯ ಸರ್ಕಾರದ ಕಾರ್ಯದರ್ಶಿಗಳಿಗೆ ಅರ್ಜಿ ಸಲ್ಲಿಸತಕ್ಕದ್ದು.

18) ದಿನಾಂಕ:10–7–96 ಸಂಖ್ಯೆ–ಎಫ್ ಡಿ 1 ಟಿಎಫ್‌ಪಿ 96 ರ ಸರ್ಕಾರಿ ಆದೇಶದನ್ವಯ ಆರ್ಥಿಕ ಇಲಾಖೆ ಸಹಮತಿಯನ್ನು ಪೂರ್ವಭಾವಿಸಿ ಈ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶಿವಕುಮಾರ್**

ಪಿ.ಆರ್. 811 ಸರ್ಕಾರದ ಅಧೀನ ಕಾರ್ಯದರ್ಶಿ–2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಕೆ. ತಿಮ್ಮಪ್ಪ, ಮಾಜಿ ಪಿಸಿ, ಹರದನಹಳ್ಳಿ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್ ಮೈಸೂರು ನಗರ ಇವರ ಆದೇಶ ಸಂಖ್ಯೆ:ಇವಿ/16/2003-04, ಓಬಿ ಸಂಖ್ಯೆ:296/2004-05, ದಿನಾಂಕ:30-08-2004.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಕಮೀಷನರ್ ಮೈಸೂರು ನಗರ ಇವರ ಆದೇಶ ಸಂಖ್ಯೆ:ಮೇಲ್ಮನವಿ/13/2005-06, ದಿನಾಂಕ:23-06-2005.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:05-07-2005.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/129/2005, ದಿನಾಂಕ:31-12-2005.

**ಪ್ರಸ್ತಾವನೆ:**

ಶ್ರೀ ಕೆ.ತಿಮ್ಮಪ್ಪ, ಮಾಜಿ ಪಿಸಿ-131 ದೇವರಾಜ ಪೊಲೀಸ್ ಠಾಣೆಯಲ್ಲಿ (ಓ.ಓ.ಡಿ. ಯಾಗಿ ವಿಜಯನಗರ ಪೊಲೀಸ್ ಠಾಣೆಯಲ್ಲಿ) ಕರ್ತವ್ಯನಿರ್ವಹಿಸುತ್ತಿದ್ದ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1. "ದಿನಾಂಕ:07-07-2002 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾದ ಬಗ್ಗೆ ದಿನಾಂಕ:05-08-2002ರಂದು ಹೊರಡಿಸಿದ ಪಲಾಯಿತ ನೋಟೀಸನ್ನು ದಿನಾಂಕ:14-09-2002ರಂದು ಸ್ವೀಕರಿಸಿದರೂ, ದಿನಾಂಕ:03-12-2002ರವರೆಗೆ ಕರ್ತವ್ಯಕ್ಕೆ ಹಾಜರಾಗದೇ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಮೈಸೂರು ನಗರ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:30-08-2004ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಕಮೀಷನರ್ ಮೈಸೂರು ನಗರ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:23-06-2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಒಟ್ಟು 150 ದಿನಗಳ ಅವಧಿಗೆ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರುಹಾಜರಾಗಿರುವುದು ಸಾಬೀತಾಗಿದೆ. ಸುತ್ತೋಲೆ ಸಂಖ್ಯೆ:ಸಿಆಸುಇ 18 ಸೇಇವಿ 2001, ದಿನಾಂಕ:14-09-2001ರ ರೀತ್ಯಾ 4 ತಿಂಗಳಿಗಿಂತ ಹೆಚ್ಚು ಅವಧಿಯ ಗೈರು ಹಾಜರಿಗೆ ಸೇವೆಯಿಂದ ವಜಾ ಮಾಡಿದ ದಂಡನೆ ವಿಧಿಸಬಹುದೆಂದಿರುತ್ತದೆ. ಅರ್ಜಿದಾರರು 1996ರಲ್ಲಿ ಕರ್ತವ್ಯಕ್ಕೆ ಸೇರಿದ್ದು, ಹಲವು ಬಾರಿ ಕರ್ತವ್ಯಕ್ಕೆ ಗೈರುಹಾಜರಾಗಿದ್ದು, ಲಘು ದಂಡನೆಗಳನ್ನು ವಿಧಿಸಿದ್ದರೂ ತಮ್ಮ ತಪ್ಪನ್ನು ತಿದ್ದಿಕೊಂಡಿರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಸಮಂಜಸವಾಗಿದೆ. ಆದ್ದರಿಂದ ಈ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 46 ಪೊಸಿಅ 2006 ಬೆಂಗಳೂರು ದಿನಾಂಕ:15ನೇ ಮೇ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ತಿಮ್ಮಪ್ಪ, ಮಾಜಿ ಪಿಸಿ-131 ಮೇಟಗಳ್ಳಿ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:05-07-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಬಸವರಾಜು**

ಪಿ.ಆರ್. 804 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಡಿ.ಹೊನ್ನಯ್ಯ, ಎಪಿಸಿ-28, ಡಿಎಆರ್., ಮಂಡ್ಯ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ:ಡಿಇ/8/96-97 ಓಬಿ ಸಂಖ್ಯೆ:59/1999-2000. ದಿನಾಂಕ:19/22-06-1999.
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:16-04-2005.
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ:ಅಪೀಲು/2/80/2005 ದಿನಾಂಕ:03-11-2005.

**ಪ್ರಸ್ತಾವನೆ:**

ಶ್ರೀ ಡಿ.ಹೊನ್ನಯ್ಯ, ಎಪಿಸಿ-28, ಡಿಎಆರ್., ಮಂಡ್ಯ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1. "ದಿನಾಂಕ:12-12-1996ರ ಸುಮಾರು 19-45 ಗಂಟೆಯಲ್ಲಿ, ಮಂಡ್ಯ ಜಿಲ್ಲಾ ಸಶಸ್ತ್ರ ಮೀಸಲು ಪಡೆ ಕಚೇರಿಯಲ್ಲಿ ನಡೆಸುತ್ತಿದ್ದ ರೋಲ್‌ಕಾಲ್ ವೇಳೆ ಪೊಲೀಸ್ ಸೆಂಟ್ರಿ ರವರನ್ನು ``ಏಕೆ ರೋಲ್‌ಕಾಲ್ ಕರೆದಿಲ್ಲ`` ಎಂಬುದಾಗಿ ಉದ್ವೇಗದಿಂದ ಕಿರುಚಾಡಿದ್ದು, ಸಮಾಧಾನ ಪಡಿಸಲು ಯತ್ನಿಸಿದ ಆರ್‌ಎಸ್‌ಐ ಶ್ರೀ ದೊಡ್ಡದೇವ ರಾಜೇಗೌಡರನ್ನು `ನೀನು ಕುರುಬನೋ, ತಿರುಬನೋ` ಎಂಬುದಾಗಿ ಹೀಯಾಳಿಸಿರುತ್ತಾರೆ."

2. "ದಿನಾಂಕ:13-12-1996ರಂದು ರಾತ್ರಿ 22-00 ಗಂಟೆಯ ಸಮಯದಲ್ಲಿ ಮಧ್ಯಪಾನ ಮಾಡಿ, ಬರೇ ನಿಕ್ಕರ್ ಧರಿಸಿಕೊಂಡು ಆರ್‌ಎಸ್‌ಐ ಶ್ರೀ ದೊಡ್ಡದೇವ ರಾಜೇಗೌಡರು ವಾಸಿಸುತ್ತಿದ್ದ ಮನೆಯ ಬಳಿಗೆ ಹೋಗಿ, ``ಹೇ ಕುರುಬ ನೀನು ನನ್ನನ್ನು ಸಸ್ಪೆಂಡ್ ಮಾಡಿಸಿದ್ದೀಯ ಇತ್ಯಾದಿ ಕಿರಿಚಾಡುವ ಮೂಲಕ ಅತೀವ ದುರ್ನಡತೆ, ಮತ್ತು ಉದ್ಧಟತನವನ್ನು ಪ್ರದರ್ಶಿಸಿರುತ್ತಾರೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:19/22-06-1999ರ ಆದೇಶದಲ್ಲಿ ಅರ್ಜಿದಾರರ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ತಡೆಹಿಡಿಯುವ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಮೇಲ್ಮನವಿ ಸಲ್ಲಿಸಿರುವುದಿಲ್ಲ. 6 ವರ್ಷಗಳ ನಂತರ ಸರ್ಕಾರಕ್ಕೆ ತಮ್ಮ ಮನವಿ ಸಲ್ಲಿಸಿ, ತಾನು ಸಮಾಜದ ಅತೀ ಶೋಷಿತ ಜನಾಂಗಕ್ಕೆ ಸೇರಿದ ಹಾಗೂ ಇಲಾಖೆಯಲ್ಲಿ ಕೆಳದರ್ಜೆ ನೌಕರನೆಂಬುದನ್ನು ಮರೆತು, ಮಾನವೀಯ ಸೌಜನ್ಯತೆ ದಯೆ ಕೋರದೆ, ದಂಡನೆ ವಿಧಿಸಿರುವುದಾಗಿ ತಿಳಿಸಿ, ಈ ದಂಡನಾದೇಶವನ್ನು ರದ್ದುಪಡಿಸಿ, ನಿರಾತಂಕದಿಂದ ವಯೋ ನಿವೃತ್ತಿ ಹೊಂದಲು ಅವಕಾಶ ನೀಡುವಂತೆ ದಿನಾಂಕ:16-04-2005ರ ತಮ್ಮ ಮನವಿಯಲ್ಲಿ ಕೋರಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ನಿಯಮಾನುಸಾರ ಮೇಲ್ಮನವಿಯನ್ನು 3 ತಿಂಗಳೊಳಗೆ ಸಲ್ಲಿಸದೇ ಇದ್ದರೂ, ವಿಳಂಬ ಮನ್ನಾ ಮಾಡಿ, ಅರ್ಜಿಯನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತಮ್ಮ ಸೇವಾ ಅವಧಿಯಲ್ಲಿ ಸುಮಾರು ಬಾರಿ ಶಿಕ್ಷೆಗಳನ್ನು ಪಡೆದಿದ್ದರೂ, ತಮ್ಮ ನಡತೆಯನ್ನು ತಿದ್ದಿಕೊಂಡಿರುವುದಿಲ್ಲ. ತನ್ನ ಸಹೋದ್ಯೋಗಿಗಳಿಗೆ ಏಕವಚನದಲ್ಲಿ ನಿಂದಿಸಿ, ಕೂಗಾಡಿ, ಹೊಡೆಯಲು ಹೋಗಿ, ಪೊಲೀಸ್ ಇಲಾಖೆಗೆ ಸರಿಯಲ್ಲದ ರೀತಿಯಲ್ಲಿ ವರ್ತಿಸಿರುವುದು ಕಂಡು ಬರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷ್ಯತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 70 ಪೊಸಿಅ 2006 ಬೆಂಗಳೂರು, ದಿನಾಂಕ: 5ನೇ ಮೇ 2006.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ.ಹೊನ್ನಯ್ಯ, ಎಪಿಸಿ-28 ಡಿಎಆರ್ ಮಂಡ್ಯ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:16-04-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಬಸವರಾಜು**

ಪಿ.ಆರ್. 805 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಪಿ.ಕೆ.ಚೌಧರಿ, ಪಿಎಸ್‌ಐ ಡಿಸಿಆರ್‌ಬಿ, ಬಿಜಾಪುರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ:ಡಿಇ/12/ಉಪ/2002, ದಿನಾಂಕ:21-05-2003.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ:ಅಪೀಲು/6/13/2003-04, ದಿನಾಂಕ:08-11-2004.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:28-02-2005.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/40/2005, ದಿನಾಂಕ:30-06-2005 ಮತ್ತು 29-11-2005.

**ಪ್ರಸ್ತಾವನೆ:**

ಶ್ರೀ ಪಿ.ಕೆ.ಚೌಧರಿ, ಪಿಎಸ್‌ಐ ಡಿಸಿಆರ್‌ಬಿ, ಬಿಜಾಪುರ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ನೀವು ಶ್ರೀ ಪಿ.ಕೆ.ಚೌಧರಿ, ಆಗಿನ ಪಿಎಸ್‌ಐ ಹೊರ್ತಿ ಪೊಲೀಸ್ ಠಾಣೆ, ಇವರು ದಿನಾಂಕ:25-11-1998ರಂದು ದಾಖಲಾದ ಹೊರ್ತಿ ಪೊಲೀಸ್ ಠಾಣೆ (UD) ನಂ.17/98 ಕಲಂ 174 crpc ನೇದ್ದರ ತನಿಖಾಧಿಕಾರಿಯಾಗಿದ್ದು, ಸದರಿ ಪಟ್ಟಣದಲ್ಲಿ ಮೃತ ಮಲ್ಲಪ್ಪಾ ಮಾಳಸಿದ್ದಪ್ಪಾ ಮುತಗಿ, ಸಾ:ತಡವಲಗಾ, ಇವನ ಸಾವಿನ ಹಿನ್ನೆಲೆಯ ಬಗ್ಗೆ ಸಾಕಷ್ಟು ಸಂಶಯಗಳು ಇದ್ದರೂ, ನೀವು ತನಿಖೆಯನ್ನು ಸರಿಯಾಗಿ, ವಿವರವಾಗಿ ಕ್ರಮಬದ್ಧವಾಗಿ ಮಾಡಿರುವುದಿಲ್ಲ. ಇದು ಒಂದು ಕೊಲೆಯ ಪ್ರಕರಣವಾಗಿದ್ದರೂ ಸಹ ದುರುದ್ದೇಶದಿಂದ, ಸದರಿ ಕೊಲೆಯ ಪ್ರಕರಣವನ್ನು ಮುಚ್ಚಿ ಹಾಕಿದ್ದೀರಿ. ಈ ಮೂಲಕ ನೀವು ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆ, ಕರ್ತವ್ಯಚ್ಯುತಿ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:21-05-2003ರ ಆದೇಶದಲ್ಲಿ ಅರ್ಜಿದಾರರ ಮುಂಬರುವ ಒಂದು ವಾರ್ಷಿಕ ವೇತನ ಬಡ್ತಿಯನ್ನು ಅವರ ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಎರಡು ವರ್ಷಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:08-11-2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ಮೇಲಿನ ಆರೋಪಗಳ ಗಂಭೀರತೆಯನ್ನೂ ಹಾಗೂ ಇಲಾಖೆ ವಿಚಾರಣೆಯಲ್ಲಿ ಆರೋಪಗಳು ಸಾಬೀತಾಗಿದೆ ಎಂಬ ವರದಿಯನ್ನು ಪರಿಶೀಲಿಸಿದ ನಂತರ ಶಿಸ್ತು ಪ್ರಾಧಿಕಾರಿಯ ದಂಡನೆ ಆರೋಪಕ್ಕೆ ಸಮಂಜಸವಾಗಿದೆ ಎಂದು ಪರಿಗಣಿಸಲಾಗಿದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 99 ಪೊಸಿಅ 2005 ಬೆಂಗಳೂರು, ದಿನಾಂಕ: 15ನೇ ಮೇ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ)ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪಿ.ಕೆ.ಚೌಧರಿ, ಪಿಎಸ್‌ಐ DCRB ಬಿಜಾಪುರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:28-02-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಬಸವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. 806

**ವಿಷಯ:** ಶ್ರೀ ನಸೀರುಲ್ಲಾಖಾನ್ ಮಾಜಿ ಎ.ಆರ್.ಎಸ್.ಐ., ಸಿಎಆರ್ (ಕೇಂದ್ರ) ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್ ಸಿಎಆರ್ (ಕೇಂದ್ರ) ಬೆಂಗಳೂರು, ಇವರ ಆದೇಶ ಸಂಖ್ಯೆ:ಡಿಇ/35/2001-02, ಆಪು ಸಂಖ್ಯೆ:21/2002-03, ದಿನಾಂಕ:28-09-2002.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ ಆಡಳಿತ ಮತ್ತು ಸಿಎಆರ್, ಬೆಂಗಳೂರು ಇವರ ಆದೇಶ ಸಂಖ್ಯೆ:37/ಅಪೀಲು/2002-03, ಆಪು ಸಂಖ್ಯೆ:580/03, ದಿನಾಂಕ: 12-03-2003.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:03-11-2003.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ:ಅಪೀಲು/2/12/2003-04, ದಿನಾಂಕ:29-11-2003.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ/05/ಸಿಎಸ್‌ಎಸ್/06, ದಿನಾಂಕ: 22-04-2006.

**ಪ್ರಸ್ತಾವನೆ:**

ಶ್ರೀ ನಸೀರುಲ್ಲಾಖಾನ್, ಎಆರ್‌ಎಸ್‌ಐ, 2ನೇ ಕಂಪೆನಿ, ಸಿಎಆರ್ (ಕೇಂದ್ರ) ಬೆಂಗಳೂರು ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಶ್ರೀ ನಸೀರುಲ್ಲಾಖಾನ್, ಎ.ಆರ್.ಎಸ್.ಐ., 2ನೇ ವಿಭಾಗ, ಸಿ.ಎ.ಆರ್., (ಕೇಂದ್ರ) ಸ್ಥಾನ, ಬೆಂಗಳೂರು ಆದ ನೀವು ದಿನಾಂಕ:31-08-2001ರಂದು ಮಾನ್ಯ ಉಪ ಆರಕ್ಷಕ ಆಯುಕ್ತರು, ನಗರ ಸಶಸ್ತ್ರ ಮೀಸಲು ಪಡೆ (ಕೇಂದ್ರಸ್ಥಾನ) ಬೆಂಗಳೂರು ರವರ ವಾರದ ಕವಾಯತಿಗೆ ಮುಖ ಕ್ಷೌರ ಮಾಡದೇ ಗಡ್ಡವನ್ನು ಬೆಳೆಸಿಕೊಂಡು ಮತ್ತೆ ಹೇರ್ ಕಟ್ ಮಾಡಿಸದೇ ಬಂದಿದ್ದು, ಡ್ರಿಲ್ ಮ್ಯಾನುಯಲ್ 9 (ಸಿ ಮತ್ತು ಡಿ)ರಲ್ಲಿ ತಿಳಿಸಿರುವಂತೆ ನಿಯಮವನ್ನು ಪಾಲಿಸಿರುವುದಿಲ್ಲ. ಹಾಗೂ ಮುಖ ಕ್ಷೌರ ಮತ್ತು ತಲೆ ಕ್ಷೌರ ಮಾಡಿ ಆರ್.ಪಿ.ಐ., ರವರ ಮುಂದೆ ಹಾಜರಾಗಲು ಸೂಚಿಸಿದರೂ ಸಹ ಮೇಲಾಧಿಕಾರಿಗಳ ಆದೇಶವನ್ನು ಉಲ್ಲಂಘಿಸಿದ್ದು, ನಿಮ್ಮ ಕರ್ತವ್ಯದಲ್ಲಿ ಬೇಜವಾಬ್ದಾರಿ ಹಾಗೂ ಅಶಿಸ್ತನ್ನು ತೋರಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್, ಸಿಎಆರ್ (ಕೇಂದ್ರ) ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:28-09-2002ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಆಯುಕ್ತರು, ಆಡಳಿತ ಮತ್ತು ಸಿಎಆರ್, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:12-03-2003ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. 1982ಕ್ಕಿಂಥ ಮೊದಲು ಅಂದರೆ ಪೊಲೀಸ್ ಡ್ರಿಲ್‌ಮ್ಯಾನ್ಯುಯಲ್‌ಗೆ ತಿದ್ದುಪಡಿ ಆಗುವುದಕ್ಕಿಂತ ಮುಂಚೆ, ಗಡ್ಡಬೆಳೆಸಿರುವ ಪೊಲೀಸ್ ಪೇದೆಗಳನ್ನು ಪೊಲೀಸ್ ಇಲಾಖೆಯಲ್ಲಿ ಸಮವಸ್ತ್ರ ಕಡ್ಡಾಯವಲ್ಲದ ಹುದ್ದೆಗಳಲ್ಲಿ ಸಕ್ರಮಗೊಳಿಸಲಾಗುತ್ತಿತ್ತು. ಚಾಲ್ತಿಯಲ್ಲಿರುವ ಪೊಲೀಸ್ ಡ್ರಿಲ್ ಕೈಪಿಡಿಯಲ್ಲಿ ಗಡ್ಡ ಬೆಳೆಸಿರುವ ಮತ್ತು ಉದ್ದನೇಯ ಕೂದಲು ಹೊಂದಿರುವುದನ್ನು ಅಶಿಸ್ತಿನ ಕೃತ್ಯವೆಂದು ಪರಿಗಣಿಸಲಾಗುತ್ತಿದೆ.

ಶ್ರೀ ನಸೀರುಲ್ಲಾಖಾನ್ ರವರನ್ನು ಸೇವೆಗೆ ಪುನರ್ ನೇಮಕ ಮಾಡುವ ಬಗ್ಗೆ ಈ ಹಿಂದಿನ ಮಾನ್ಯ ಮುಖ್ಯ ಮಂತ್ರಿಯವರ ನಿರ್ದೇಶನದಂತೆ ಗೃಹ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು, ಕಾನೂನು ಇಲಾಖೆಯ ಕಾರ್ಯದರ್ಶಿಗಳು, ಅಡ್ವೋಕೇಟ್ ಜನರಲ್ ರವರೊಡನೆ ಚರ್ಚಿಸಿರುತ್ತಾರೆ. ಅನುಕಂಪದ ಆಧಾರದ ಮೇಲೆ ಸದರಿ ನೌಕರರನ್ನು ಸೇವೆಯಲ್ಲಿ ಪುನರ್‌ಸ್ಥಾಪಿಸಿ, ಸಮವಸ್ತ್ರ ಕಡ್ಡಾಯವಲ್ಲದ ಹುದ್ದೆಯಲ್ಲಿ ಸಕ್ರಮಗೊಳಿಸಲು ಪರಿಗಣಿಸಬಹುದೆಂದು ಹಿಂದಿನ ಅಡ್ವೋಕೇಟ್ ಜನರಲ್ ರವರು ಅಭಿಪ್ರಾಯ ಪಟ್ಟಿರುತ್ತಾರೆ.

ಸಾಮಾನ್ಯವಾಗಿ ಇಂತಹ ಪ್ರಕರಣಗಳನ್ನು ಪ್ರೋತ್ಸಾಹಿಸಬಾರದು ಸಮವಸ್ತ್ರದಲ್ಲಿರಬೇಕಾಗಿರುವ ಪೊಲೀಸ್‌ರಿಗೆ (ಸಿಖ್‌ರನ್ನು ಹೊರತುಪಡಿಸಿ) ಗಡ್ಡ ಬೆಳೆಸಲು ಅವಕಾಶ ನೀಡದಿರುವ ಪೊಲೀಸ್ ಕೈಪಿಡಿಯಲ್ಲಿರುವ ನಿಯಮಗಳನ್ನು ಬೆಂಬಲಿಸಬೇಕು. ಈ ಮೇಲ್ಕಂಡ ಸನ್ನಿವೇಶದಲ್ಲಿ ಶ್ರೀ ನಸೀರುಲ್ಲಾಖಾನ್ ರವರ ಪ್ರಕರಣ ಅಪವಾದತ್ಮಕವಾಗಿದ್ದು, ಈ ಪ್ರಕರಣವನ್ನು ಪೂರ್ವ ನಿದರ್ಶನವೆಂದು ಪರಿಗಣಿಸದೇ ಹಾಗೂ ಇಂತಹ ಯಾವುದೇ ಪ್ರಕರಣವನ್ನು ಪೊಲೀಸ್ ಇಲಾಖೆಯಲ್ಲಿ ಮಾಡದೆ ಇರಬೇಕೆಂದು ಸೂಚನೆಗಳನ್ನು ನೀಡಲಾಗುತ್ತದೆ.

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, 1) ಶ್ರೀ ನಸೀರುಲ್ಲಾಖಾನ್ ರವರನ್ನು ಸೇವೆಗೆ ಪುನರ್ ನೇಮಕ ಮಾಡಲು ಮತ್ತು 2) ಸೇವೆಯಿಂದ ವಜಾಗೊಂಡ ದಿನಾಂಕದಿಂದ ಸೇವೆಗೆ ಮರುನೇಮಕಾತಿ ಹೊಂದಿ ಕರ್ತವ್ಯಕ್ಕೆ ಹಾಜರಾಗುವ ದಿನಾಂಕದವರೆಗಿನ ಅವಧಿಯನ್ನು ಕರ್ನಾಟಕ ಸಿವಿಲ್ ಸೇವೆಗಳು ನಿಯಮಾವಳಿಯ ನಿಯಮ 8(14-A)ರಂತೆ ಸೇವೆಯಿಂದ ಹೊರಗುಳಿದ ಅವಧಿ (dies-non) ಎಂದು ಪರಿಗಣಿಸಲು, ಸಮವಸ್ತ್ರ ಕಡ್ಡಾಯ ವಲ್ಲದ ಹುದ್ದೆಯಲ್ಲಿ - CRE ಘಟಕದಲ್ಲಿ ನೇಮಕಾತಿ ನೀಡಲು ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲು ಸರ್ಕಾರವು ಉದ್ದೇಶಿಸಿದೆ. ಸರ್ಕಾರ ಉದ್ದೇಶಿಸಿದ ಮಾರ್ಪಾಡಿಗೆ ಅನುಮೋದನೆ ನೀಡುವಂತೆ ಕರ್ನಾಟಕ ಲೋಕ ಸೇವಾ ಆಯೋಗವನ್ನು ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:22-04-2006ರ ತನ್ನ ಪತ್ರದಲ್ಲಿ ಸರ್ಕಾರ ಉದ್ದೇಶಿಸಿದ ಮಾರ್ಪಾಡಿಗೆ ತನ್ನ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 264 ಪೊಸಿಅ 2002 ಬೆಂಗಳೂರು, ದಿನಾಂಕ: 10ನೇ ಮೇ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ: 28-09-2002ರ ಶಿಸ್ತು ಪ್ರಾಧಿಕಾರಿಯ ದಂಡನಾದೇಶವನ್ನು ರದ್ದುಪಡಿಸಿ, ಶ್ರೀ ನಸೀರುಲ್ಲಾಖಾನ್, ಎಆರ್‌ಎಸ್‌ಐ, ಸಿಎಆರ್ (ಕೇಂದ್ರ) ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:03-11-2003ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

1) ಅರ್ಜಿದಾರರನ್ನು ಸೇವೆಗೆ ಪುನರ್ ನೇಮಕ ಮಾಡಲಾಗಿದೆ.
2) ಸೇವೆಯಿಂದ ವಜಾಗೊಂಡ ದಿನಾಂಕದಿಂದ ಸೇವೆಗೆ ಮರು ನೇಮಕಾತಿ ಹೊಂದಿ, ಕರ್ತವ್ಯಕ್ಕೆ ಹಾಜರಾಗುವ ದಿನಾಂಕದ ವರೆಗಿನ ಅವಧಿಯನ್ನು ಕೆಸಿಎಸ್ಆರ್ ನ ನಿಯಮ 8 (14-A) ರನ್ವಯ ಸೇವೆಯಿಂದ ಹೊರಗುಳಿದ ಅವಧಿ (Dies-non) ಎಂದು ಪರಿಗಣಿಸಿದೆ.
3) ಅರ್ಜಿದಾರರಿಗೆ ಸಮವಸ್ತ್ರ ಕಡ್ಡಾಯವಲ್ಲದ ಹುದ್ದೆಯಲ್ಲಿ CRE ಘಟಕದಲ್ಲಿ ನೇಮಕಾತಿ ನೀಡತಕ್ಕದ್ದು.
4) ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದೆ.
5) ಸಮವಸ್ತ್ರದಲ್ಲಿರಬೇಕಾಗಿರುವ ಪೊಲೀಸ್‌ರಿಗೆ (ಸಿಖ್‌ರನ್ನು ಹೊರತುಪಡಿಸಿ) ಗಡ್ಡ ಬೆಳೆಸಲು ಅವಕಾಶ ನೀಡದಿರುವ ಪೊಲೀಸ್ ಕೈಪಿಡಿ / ಡ್ರಿಲ್ ಮ್ಯಾನ್ಯುಯಲ್‌ನ ನಿಯಮಗಳನ್ನು ತಪ್ಪದೆ ಪಾಲಿಸತಕ್ಕದ್ದು. ಪ್ರಸ್ತುತ ಶ್ರೀ ನಸೀರುಲ್ಲಾಖಾನ್ ರವರ ಪ್ರಕರಣವು ಅಪವಾದಾತ್ಮಕವಾಗಿದ್ದು, ಈ ಪ್ರಕರಣವನ್ನು ಪೂರ್ವ ನಿದರ್ಶನವೆಂದು ಪರಿಗಣಿಸದೇ ಹಾಗೂ ಇಂತಹ ಯಾವುದೇ ಪ್ರಕರಣವನ್ನು ಪೊಲೀಸ್ ಇಲಾಖೆಯಲ್ಲಿ ಮಾಡದೆ ಇರಬೇಕೆಂದು ಸೂಚಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:22-04-2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಬಸವರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. 807

**ವಿಷಯ:** ಶ್ರೀ ಎಂ.ಶಿವಣ್ಣ, ಮಾಜಿ ಎಎಸ್ಐ ಚನ್ನಪಟ್ಟಣ ಗ್ರಾಮಾಂತರ ಪೊಲೀಸ್ ಠಾಣೆ, ಬೆಂಗಳೂರು ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಂಗಳೂರು ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ/ಪನ್ಸಿ/ಡಿಡಿ/19/1991-92, ಓಬಿ ಸಂಖ್ಯೆ:130/2000-2001, ದಿನಾಂಕ:12-06-2000.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ:ಅಪೀಲು/33/2000-01 ಓಬಿ ಸಂಖ್ಯೆ:100/2000-01 ದಿನಾಂಕ:04-01-2001.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:23-12-2004.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/11/2005, ದಿನಾಂಕ:08-07-2005 ಮತ್ತು 22-02-2006.

**ಪ್ರಸ್ತಾವನೆ:**

ಶ್ರೀ ಎಂ.ಶಿವಣ್ಣ, ಮಾಜಿ ಎಎಸ್ಐ ಚನ್ನಪಟ್ಟಣ ಗ್ರಾಮಾಂತರ ಪೊಲೀಸ್ ಠಾಣೆ, ಬೆಂಗಳೂರು ಜಿಲ್ಲೆ, ಇವರು ಈ ಹಿಂದೆ ಅಕ್ಕೂರು ಪೊಲೀಸ್ ಠಾಣೆಯಲ್ಲಿ ಹೆಚ್‌ಸಿ-605 ಆಗಿ ಕರ್ತವ್ಯನಿರ್ವಹಿಸುತ್ತಿದ್ದಾಗ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅಕ್ಕೂರು ಪೊಲೀಸ್ ಠಾಣೆಯಲ್ಲಿ ಮೊ.ಸಂಖ್ಯೆ:129/91 ಕಲಂ 307 ಐಪಿಸಿ ರೀತ್ಯಾ ಪ್ರಕರಣ ದಾಖಲಾಗಿದ್ದು, ನಂತರ ದೋಷಾರೋಪಣಾ ಪಟ್ಟಿಯನ್ನು ನ್ಯಾಯಾಲಯದಲ್ಲಿ ಸಲ್ಲಿಸಿ, ನ್ಯಾಯಾಲಯವು ಇವರಿಗೆ ದಿನಾಂಕ:07-06-1998ರಂದು 7 ವರ್ಷಗಳ ಕಠಿಣ ಸಜೆ ಮತ್ತು ರೂ.10,000/-ಗಳ ದಂಡ ವಿಧಿಸಿದೆ, ತಪ್ಪಿದಲ್ಲಿ 3 ತಿಂಗಳ ಕಾಲ ಸಾದಾ ಸಜೆ ಅನುಭವಿಸಲು ಆದೇಶಿಸಿದೆ.

**ದೋಷರೋಪಣೆ:**

1. "ಶಿಸ್ತು ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದಾಗ, ದಿನಾಂಕ:25-10-1991ರಂದು ಸಹೋದ್ಯೋಗಿಯಾದ ಶ್ರೀ ಲಕ್ಷ್ಮಿನರಸಿಂಹಯ್ಯ ಎಎಸ್ಐ ಇವರ ಮನೆಗೆ ಅರ್ಧ ರಾತ್ರಿಯಲ್ಲಿ ಹೋಗಿ, ಅವರ ಹೊಟ್ಟೆಗೆ ತಿವಿದು ರಕ್ತಗಾಯ ಮಾಡಿರುವುದು."

ಈ ಹಿನ್ನೆಲೆಯಲ್ಲಿ, ನೌಕರರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಂಗಳೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 12-06-2000ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೇಂದ್ರ ವಲಯ, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:04-01-2001ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ನ್ಯಾಯಾಲಯದ ಆದೇಶವನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು 1968ರಲ್ಲಿ ಕರ್ತವ್ಯಕ್ಕೆ ಸೇರಿದ್ದು, 1971ರಲ್ಲಿ ದುರ್ನಡತೆಗಾಗಿ ಅಮಾನತ್ತಿನಲ್ಲಿಡಲಾಗಿತ್ತು. 1974ರಲ್ಲಿ ದುರ್ನಡತೆಗಾಗಿ ಇಲಾಖಾ ವಿಚಾರಣೆ ನಡೆಸಲಾಗಿತ್ತು. 1982ರಲ್ಲಿ ದುರ್ನಡತೆಗಾಗಿ ಇಲಾಖಾ ವಿಚಾರಣೆ ನಡೆಸಲಾಗಿತ್ತು. 1985ರಲ್ಲಿ ಕ್ರಿಮಿನಲ್ ಮೊಕದ್ದಮೆ ದಾಖಲಾಗಿದ್ದರಿಂದ ಸೇವೆಯಿಂದ ವಜಾ ಮಾಡಲಾಗಿತ್ತು. ಆದರೆ ನ್ಯಾಯಾಲಯದಲ್ಲಿ ಅವರ ಅರ್ಜಿ ಅಂಗೀಕರಿಸಲ್ಪಟ್ಟಿದ್ದರಿಂದ, ಮತ್ತೆ ಸೇವೆಗೆ ಪುನರ್ ನೇಮಿಸಿ, ನ್ಯಾಯಾಲಯದ ಅಂತಿಮ ತೀರ್ಪು ಹಾಗೂ ಇಲಾಖಾ ವಿಚಾರಣೆ ಬಾಕಿ ಇಡಲಾಗಿತ್ತು. ನಂತರ ಇಲಾಖಾ ವಿಚಾರಣೆ ನಡೆಸಿ, ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗುವಂತೆ ಒಂದು ವರ್ಷ ಮುಂದೂಡಲಾಯಿತು. 1991ರಲ್ಲಿ ಮತ್ತೆ ತನ್ನ ಸಹೋದ್ಯೋಗಿಗೆ ರಕ್ತ ಬರುವಂತೆ ಹೊಟ್ಟೆಗೆ ತಿವಿದ್ದರಿಂದ, ಅಮಾನತ್ತಿನಲ್ಲಿಟ್ಟು, ಇಲಾಖಾ ವಿಚಾರಣೆ ನಡೆಸಿ, ಆರೋಪ ಸಾಬೀತಾಗಿದ್ದ ನ್ಯಾಯಾಲಯದಲ್ಲಿ ಮೊಕದ್ದಮೆ ಇದ್ದ ಕಾರಣ, ಇವರಿಗೆ ಬಡ್ತಿಯನ್ನು ನೀಡಿ, ASI ಆಗಿ 1994ರಲ್ಲಿ ವರ್ಗಾವಣೆ ಸಹ ಮಾಡಿರುತ್ತಾರೆ. ಅರ್ಜಿದಾರರು ಮೊದಲಿನಿಂದಲೂ ತಮ್ಮ ದುರ್ನಡತೆ ಪ್ರದರ್ಶಿಸುತ್ತಿದ್ದು, ಹಲವು

ಬಾರಿ ದಂಡನೆಗಳನ್ನು ವಿಧಿಸಿದ್ದರೂ ತಮ್ಮ ನಡತೆಯನ್ನು ತಿದ್ದುಕೊಂಡಿರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷ್ಯತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 312 ಪೊಸಿಅ 2005 ಬೆಂಗಳೂರು, ದಿನಾಂಕ: 15ನೇ ಮೇ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಶಿವಣ್ಣ, ಮಾಜಿ ಎಎಸ್ಐ ಚನ್ನಪಟ್ಟಣ ಗ್ರಾಮಾಂತರ ಪೊಲೀಸ್ ಠಾಣೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಬಸವರಾಜು**

ಪಿ.ಆರ್. 808

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಪಿ. ವೆಂಕಟಸ್ವಾಮಿ, ಡಿವೈ.ಎಸ್.ಪಿ., ಹಾಸನ ಉಪ ವಿಭಾಗ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ:1) ಅಪೀಲು/7/14/2004-05, ದಿನಾಂಕ:01-03-2005 2) ಸಿಬಿ/5/6/2005-06. ದಿನಾಂಕ:11-08-2005.
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:16-08-2005. ಮತ್ತು 30-08-2005.
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ:ಸಿಬಿ/5/6/2005-06, ದಿನಾಂಕ:22-11-2005.

**ಪ್ರಸ್ತಾವನೆ:**

ಶ್ರೀ ಪಿ.ವೆಂಕಟಸ್ವಾಮಿ, ಡಿವೈ.ಎಸ್.ಪಿ., ಹಾಸನ ಉಪ ವಿಭಾಗ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**1. ದೋಷರೋಪಣೆ:**

"1. ನೀವು ಮೈಸೂರು ಗ್ರಾಮಾಂತರ ವೃತ್ತದಲ್ಲಿ ಸಿಪಿಐ ಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ದಿನಾಂಕ:18-11-1998 ರಿಂದ 29-11-1999 ರವರೆಗೆ ಐಎಂವಿ ಕಾಯ್ದೆ ಪ್ರಕಾರ ಸ್ಥಳದಲ್ಲಿ ದಂಡ ವಸೂಲಿ ಹಣ ರೂ.53,700/- ಗಳನ್ನು ವಸೂಲಿ ಮಾಡಿರುತ್ತೀರಿ. ಸರ್ಕಾರದ ಆದೇಶ ಸಂಖ್ಯೆ:FDP 5 GMR 84 ದಿನಾಂಕ:27-07-1984ರ ಪ್ರಕಾರ ದಂಡ ವಸೂಲಿ ಮಾಡಿದ ಹಣವನ್ನು ಪ್ರತಿ ಸೋಮವಾರ ಟ್ರೆಜರಿಗೆ (ಬ್ಯಾಂಕಿಗೆ) ಜಮಾ ಮಾಡಬೇಕೆಂದು ಆದೇಶ ಇರುತ್ತದೆ. ಆದರೆ, ನೀವು ವಸೂಲಿ ಮಾಡಿದ ಸದರಿ ಹಣ ರೂ.53,700/-ಗಳನ್ನು ಒಂದು ವರ್ಷಕ್ಕೂ ಮೇಲ್ಪಟ್ಟು, ನಿಮ್ಮ ಬಳಿಯಲ್ಲಿ ಇಟ್ಟುಕೊಂಡಿದ್ದು, ದಿನಾಂಕ:29-11-1999ರಂದು SBM ನಲ್ಲಿ ಜಮಾ ಮಾಡಿದ್ದು, ಸರ್ಕಾರದ ಆದೇಶವನ್ನು ಉಲ್ಲಂಘಿಸಿ, ಸರ್ಕಾರದ ಹಣವನ್ನು ದುರುಪಯೋಗ ಪಡಿಸಿಕೊಂಡು ದುರ್ನಡತೆಯನ್ನು ಎಸಗಿರುತ್ತೀರಿ."

2. "ದಿನಾಂಕ:04-12-99 ರಿಂದ 11-04-2000 ರವರೆಗೆ ದಂಡ ವಸೂಲಿ ಮಾಡಿದ ಹಣ ರೂ.1,200/- ಗಳನ್ನು ಸರ್ಕಾರಕ್ಕೆ ಜಮಾ ಮಾಡದೇ, ನಿಮ್ಮ ಬಳಿಯಲ್ಲಿ ಇಟ್ಟುಕೊಂಡಿದ್ದು, ಸರ್ಕಾರದ ಆದೇಶವನ್ನು ಉಲ್ಲಂಘಿಸಿ, ದಿನಾಂಕ:23-10-2000ರಂದು ಶ್ರೀ ಪಿ.ಬಸವರಾಜು, ಸಿಪಿಐ ರವರಿಗೆ ಪ್ರಭಾರ ವಹಿಸುವ ಸಂದರ್ಭದಲ್ಲಿ ಹಸ್ತಾಂತರಿಸಿದ್ದು, ತಾತ್ಕಾಲಿಕವಾಗಿ ಹಣ ದುರುಪ-ಯೋಗಪಡಿಸಿಕೊಂಡು, ಸರ್ಕಾರದ ಆದೇಶ ಸಂಖ್ಯೆ:FDP 5 GMR 84, ದಿನಾಂಕ:27-07-1984 ಅನ್ನು ಉಲ್ಲಂಘಿಸಿ, ಕರ್ತವ್ಯ ನಿರ್ಲಕ್ಷ್ಯತೆ ಮತ್ತು ಬೇಜವಾಬ್ದಾರಿತನ, ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ."

**2. ದೋಷರೋಪಣೆ:**

"ನೀವು ಎಸಿಪಿ ಯಾಗಿ ಕೃಷ್ಣರಾಜ ಉಪ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ನಿಮಗೆ ಮೈಸೂರಿನ ಕೃಷ್ಣರಾಜ ವಿಭಾಗದಲ್ಲಿ ನಡೆಯುತ್ತಿರುವ ಕಾನೂನು ಬಾಹಿರ ಚಟುವಟಿಕೆಗಳನ್ನು ಹತ್ತಿಕ್ಕುವಂತೆ ಸಾಕಷ್ಟು ಬಾರಿ ಮಾಸಿಕ ಸಭೆಗಳಲ್ಲಿ ಇಂತಹ ಚಟುವಟಿಕೆಗಳ ಮೇಲೆ ಕ್ರಮ ಕೈಗೊಳ್ಳಲು ತಿಳಿಸಲಾಗಿದ್ದರೂ ಕೂಡ, ನೀವು ಇಂತಹ ಚಟುವಟಿಕೆ ಬಗ್ಗೆ ಮಾಹಿತಿ ಸಂಗ್ರಹಿಸಿ ಕ್ರಮ ಕೈಗೊಳ್ಳಲು ವಿಫಲರಾಗಿ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತನ ಮತ್ತು ಬೇಜವಾಬ್ದಾರಿತನ ತೋರಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 01-03-2005 ಹಾಗೂ 11-08-2005 ಆದೇಶದಲ್ಲಿ ಅರ್ಜಿದಾರರಿಗೆ ಇನ್ನು ಮುಂದೆ ಎಚ್ಚರಿಕೆಯಿಂದ ಕರ್ತವ್ಯ ನಿರ್ವಹಿಸುವಂತೆ ಸೂಚಿಸಿರುತ್ತಾರೆ. ಹಾಗೂ ಇನ್ನು ಮುಂದೆ ಜಾಗರೂಕತೆಯಿಂದ ಇರುವಂತೆ ಮೌಖಿಕ ಎಚ್ಚರಿಕೆಯನ್ನು ನೀಡಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸ- ಲಾಗಿದೆ. ಅರ್ಜಿದಾರರು ದಿನಾಂಕ:01-03-2005ರ ಶಿಸ್ತು ಪ್ರಾಧಿಕಾರಿ ಆದೇಶವನ್ನು ರದ್ದುಪಡಿಸಲು ಕೋರಿದ್ದು, ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ರವರು ಇವರಿಗೆ ದಿನಾಂಕ:11-08-2005ರಂದು ಮತ್ತೊಮ್ಮೆ ಎಚ್ಚರಿಕೆ ನೀಡಿರುವುದನ್ನು ಸಹ ತಿಳಿಸಿರುತ್ತಾರೆ. ಅರ್ಜಿದಾರರು ಒಂದು ಪ್ರಕರಣದಲ್ಲಿ ರೂ.53,700-00/- ಗಳನ್ನು ಒಂದು ವರ್ಷಕ್ಕೂ ಮೇಲ್ಪಟ್ಟು ತಮ್ಮ ಬಳಿ ಇಟ್ಟುಕೊಂಡಿದ್ದು, ಗುರುತರವಾದ ದುರ್ನಡತೆ

ಪ್ರದರ್ಶಿಸಿರುತ್ತಾರೆ. ಮತ್ತೊಂದು ಪ್ರಕರಣದಲ್ಲಿ ಕಾನೂನು ಬಾಹಿರ ಚಟುವಟಿಕೆಗಳನ್ನು ಹತ್ತಿಕ್ಕಲು ಹಾಗೂ ಈ ಬಗ್ಗೆ ಮಾಹಿತಿ ಸಂಗ್ರಹಿಸಿ ಕ್ರಮ ಕೈಗೊಳ್ಳಲು ವಿಫಲರಾಗಿದ್ದು, ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ತೋರಿಸಿರುತ್ತಾರೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷ್ಯತೆ ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಕಂಡು ಬರುತ್ತದೆ. ಈ ಹಿನ್ನೆಲೆಯಲ್ಲಿ ಶಿಸ್ತು ಪ್ರಾಧಿಕಾರವು ಕೇವಲ ಎಚ್ಚರಿಕೆಯನ್ನು ಮಾತ್ರ ನೀಡಿದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 319 ಪೊಸಿಅ 2005 ಬೆಂಗಳೂರು, ದಿನಾಂಕ: 6ನೇ ಮೇ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪಿ.ವೆಂಕಟಸ್ವಾಮಿ, ಡಿವೈ.ಎಸ್.ಪಿ., ಹಾಸನ ಉಪ ವಿಭಾಗ, ಹಾಸನ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:16-08-2005 ಮತ್ತು 30-08-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಬಸವರಾಜು**

ಪಿ.ಆರ್. 809 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಸಹಕಾರ ಸಚಿವಾಲಯ**

**ವಿಷಯ:** ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಪಾಂಡವಪುರ, ಮಂಡ್ಯ ಜಿಲ್ಲೆ ಇದರ ವಿಶೇಷಾಧಿಕಾರಿಗಳ ಅಧಿಕಾರದ ಅವಧಿಯನ್ನು ವಿಸ್ತರಿಸುವ ಬಗ್ಗೆ-ಆದೇಶ.

**ಓದಲಾಗಿದೆ:** ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಇಎಸ್‌ಟಿಎಸ್/62-2004-05, ದಿನಾಂಕ: 22.10.2005.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಪಾಂಡವಪುರ, ಮಂಡ್ಯ ಜಿಲ್ಲೆ, ಇದರ ವಿಶೇಷಾಧಿಕಾರಿಗಳ ಅವಧಿಯನ್ನು ಸಕ್ಕರೆ ನಿರ್ದೇಶನಾಲಯದ ಆದೇಶ ದಿನಾಂಕ: 15.4.2005 ರಲ್ಲಿ ವಿಶೇಷಾಧಿಕಾರಿಗಳ ಅಧಿಕಾರದ ಅವಧಿಯನ್ನು ದಿನಾಂಕ: 21.3.2005 ರಿಂದ ಮುಂದಿನ ಆರು ತಿಂಗಳವರೆಗೆ ವಿಸ್ತರಿಸಿರುತ್ತಾರೆ. ಅದರಂತೆ ಕಾರ್ಖಾನೆಯ ವಿಶೇಷಾಧಿಕಾರಿಗಳ ಅವಧಿ ದಿನಾಂಕ: 21.9.2005ಕ್ಕೆ ಪೂರ್ಣಗೊಳ್ಳುತ್ತದೆ. ಕಾರ್ಖಾನೆಯ ವಿಶೇಷಾಧಿಕಾರಿಗಳು ಹಾಗೂ ಮಂಡ್ಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ದಿನಾಂಕ: 12.8.2005 ರಂದು ನಡೆದ ಸಭೆಯಲ್ಲಿ ಕಾರ್ಖಾನೆಯು ಕಳೆದೆರಡು ಸಾಲುಗಳಿಂದ ಕಬ್ಬು ನುರಿಸಲು ಸಾಧ್ಯವಾಗದೆ ಆರ್ಥಿಕ ತೊಂದರೆಯನ್ನು ಎದುರಿಸುತ್ತಿರುವುದರಿಂದ, ರಾಜ್ಯ ಸರ್ಕಾರವು ಕಾರ್ಖಾನೆಯನ್ನು ಗುತ್ತಿಗೆ ಆಧಾರದ ಮೇಲೆ ನೀಡಲು ತೀರ್ಮಾನಿಸಿದ್ದು, ಸದರಿ ಕಾರ್ಖಾನೆಯ ವಿಶೇಷಾಧಿಕಾರಿಗಳ ಅವಧಿಯನ್ನು ಕರ್ನಾಟಕ ಸಹಕಾರಿ ಸಂಘಗಳ ಕಾಯ್ದೆ 1959ರ ಕಲಂ 31(1) ರಡಿ 6 ತಿಂಗಳ ವರೆಗೆ ಅವಧಿಗೆ ವಿಸ್ತರಿಸಿ ಆದೇಶ ಹೊರಡಿಸುವಂತೆ ಕೋರಿ ಪ್ರಸ್ತಾವನೆಯನ್ನಯ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 45 ಸಸಕಾ 2006, ಬೆಂಗಳೂರು, ದಿನಾಂಕ: 31ನೇ ಮಾರ್ಚ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಪಾಂಡುವಪುರ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಪಾಂಡುವಪುರ, ಮಂಡ್ಯ ಜಿಲ್ಲೆ ಇದರ ವಿಶೇಷಾಧಿಕಾರಿಗಳ ಅಧಿಕಾರದ ಅವಧಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 31(1) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿನಾಂಕ: 22.9.2005 ರಿಂದ 21.3.2006ರ ವರೆಗೆ ವಿಶೇಷಾಧಿಕಾರಿಗಳ ಅಧಿಕಾರದ ಅವಧಿಯನ್ನು ವಿಸ್ತರಿಸಲಾಗಿದೆ.-

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಾಣದ ರಂಗಪ್ಪ**

ಪಿ.ಆರ್. 606 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ:** ಶ್ರೀ ಕೆ.ಪಿ. ಗಾದಿಲಿಂಗಪ್ಪ ವಕೀಲರು, ಶಿವಮೊಗ್ಗ ಇವರನ್ನು ಶಿವಮೊಗ್ಗ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಲಾ 85 ಎಲ್‌ಸಿಎಲ್ 04, ದಿನಾಂಕ: 14.07.2005.
2) ಸರ್ಕಾರಿ ಸಮಸಂಖ್ಯೆ ಪತ್ರ ದಿನಾಂಕ: 17.08.2005.
3) ಪ್ರಧಾನ ಜಿಲ್ಲಾ ಮತ್ತು ಸತ್ರನ್ಯಾಯಾಧೀಶರು, ಶಿವಮೊಗ್ಗ ಇವರ ಪತ್ರ ಎಡಿಎಂ/ಡಿಜೆಎಸ್/10390/2005, ದಿನಾಂಕ: 12.12.2005.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 14.07.2005ರ ಆದೇಶದಲ್ಲಿ ಶ್ರೀ ಕೆ.ಎಸ್. ಗೋಪಿನಾಥ್ ನೋಟರಿ, ಶಿವಮೊಗ್ಗ, ಇವರ ರಾಜಿನಾಮೆ ಅಂಗೀಕರಿಸಲಾಗಿದೆ. ಸದರಿ ಹುದ್ದೆಯ ನೇಮಕಾತಿಗೆ ಪ್ರಸ್ತಾವನೆ ಸಲ್ಲಿಸುವಂತೆ ಮೇಲೆ 2 ರಲ್ಲಿ ಓದಲಾದ ದಿನಾಂಕ: 17.08.2005ರ ಪತ್ರದಲ್ಲಿ ಕೋರಲಾಗಿತ್ತು. ಆ ಮೇರೆಗೆ ಮೇಲೆ (3) ರಲ್ಲಿ ಓದಲಾದ ದಿನಾಂಕ: 12.12.2005ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಶಿವಮೊಗ್ಗ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 85 ಎಲ್‌ಸಿಎಲ್ 2004, ಬೆಂಗಳೂರು, ದಿನಾಂಕ: 19ನೇ ಏಪ್ರಿಲ್ 2006**

ನೋಟರಿ ನಿಯಮಗಳ (1956) ನಿಯಮ 8(1) ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಅದರ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ಕೆ.ಪಿ. ಗಾದಿಲಿಂಗಪ್ಪ ಬಿನ್ ಕೆ.ಜಿ. ಪರಮೇಶ್ವರಪ್ಪ ವಕೀಲರು, ಎಂ.ಐ.ಜಿ-308, 1ನೇ ಹಂತ, ಕಲ್ಲಹಳ್ಳಿ, ಹುಡ್ಕೋ, ಶಿವಮೊಗ್ಗ ಇವರನ್ನು ಶ್ರೀ ಕೆ.ಎಸ್. ಗೋಪಿನಾಥ್, ಇವರ ರಾಜಿನಾಮೆಯಿಂದ ತೆರವಾದ ನೋಟರಿ ಹುದ್ದೆಗೆ ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಶಿವಮೊಗ್ಗ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿಪ್ರಮಾಣ ಪತ್ರ ನೀಡಲಾಗುವುದು.

ತದನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಕುಂತಲ ಹೆಚ್.ಆರ್**
ಪಿ.ಆರ್. 617 ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ವಿಷಯ:** ಶ್ರೀ ವಿ. ಸಾದಪ್ಪ, ವಕೀಲರು, ಹೊಸಕೋಟೆ, ಇವರನ್ನು ಬೆಂಗಳೂರು (ಗ್ರಾಮಾಂತರ ಜಿಲ್ಲೆ) ಹೊಸಕೋಟೆ ಕಂದಾಯ ತಾಲ್ಲೂಕಿನ ನೋಟರಿಯಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ:** 1) ಅರೆ ಸರ್ಕಾರಿ ಪತ್ರ ಸಂಖ್ಯೆ: ಲಾ 84 ಎಲ್‌ಸಿಆರ್ 2005, ದಿನಾಂಕ: 05.04.2005.
2) ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು (ಗ್ರಾಮಾಂತರ) ಇವರ ಪತ್ರ ದಿನಾಂಕ: 06.12.2005.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 05.04.2005ರ ಅರೆ ಸರ್ಕಾರಿ ಪತ್ರದಲ್ಲಿ ಶ್ರೀ ಎನ್. ಶ್ರೀನಿವಾಸ ರಾವ್, ನೋಟರಿ, ಹೊಸಕೋಟೆ ಇವರ ನಿಧನದಿಂದ ತೆರವಾದ ಹುದ್ದೆಯ ನೇಮಕಾತಿಗೆ ಪ್ರಸ್ತಾವನೆ ಸಲ್ಲಿಸುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು (ಗ್ರಾ) ಇವರನ್ನು ಕೋರಲಾಗಿತ್ತು.

ಅದರಂತೆ ಮೇಲೆ (2) ರಲ್ಲಿ ಓದಲಾದ ದಿನಾಂಕ: 06.12.2005ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು (ಗ್ರಾ) ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.-

**ಸರ್ಕಾರಿ ಆದೇಶ ಸಂಖ್ಯೆ: ಲಾ 84 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ: 19ನೇ ಏಪ್ರಿಲ್ 2006**

ನೋಟರಿ ನಿಯಮಗಳ (1956)ರ ನಿಯಮ 8(1) ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ವಿ. ಸಾದಪ್ಪ, ಬಿನ್ ಶ್ರೀ ಚಿಕ್ಕವೆಂಕಟರಾಯಪ್ಪ, ವಕೀಲರು, ನಂ.15/2, ವಿನಾಯಕನಗರ, 4ನೇ ಕ್ರಾಸ್, ವಿವಿ, ಎಕ್ಸ್‌ಟೆನ್‌ಷನ್, ಹೊಸಕೋಟೆ, ಬೆಂಗಳೂರು (ಗ್ರಾಮಾಂತರ ಜಿಲ್ಲೆ) ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಹೊಸಕೋಟೆ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಕುಂತಲ ಹೆಚ್.ಆರ್**
ಪಿ.ಆರ್. 618 ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಜಿಲ್ಲಾ ಶಸ್ತ್ರ ಚಿಕಿತ್ಸಕರುಗಳಿಗೆ ಸಾಂದರ್ಭಿಕ ರಜೆಯನ್ನು ಮಂಜೂರು ಮಾಡುವ ಅಧಿಕಾರವನ್ನು ಸಂಬಂಧಿತ ಜಿಲ್ಲಾಧಿಕಾರಿಯವರಿಗೆ ನೀಡುವ ಬಗ್ಗೆ.

**ಓದಲಾಗಿದೆ:** ದಿನಾಂಕ: 21.6.2005 ಸಂಖ್ಯೆ: ಹಿಶ್ರೇಅ. 39/2005-06ರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರ ಪತ್ರ.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರ ಪ್ರಸ್ತಾವನೆಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ಜಿಲ್ಲಾ ಶಸ್ತ್ರ ಚಿಕಿತ್ಸಕರುಗಳಿಗೆ ಸಾಂದರ್ಭಿಕ ರಜೆಯನ್ನು ಮಂಜೂರು ಮಾಡುವ ಸಂಬಂಧ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ನಿಯಮಾನುಸಾರ ನಿಗದಿಪಡಿಸಿದ ಮಿತಿಯಲ್ಲಿ ಮಂಜೂರು ಮಾಡುವ ಅಧಿಕಾರವನ್ನು ನೀಡುವಂತೆ ಪ್ರಸ್ತಾಪಿಸಿರುತ್ತಾರೆ.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ ಹಾಗೂ ಈ ಕೆಳಕಂಡಂತೆ ಆದೇಶಿಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.-

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 451 ಎಂಎಸ್ಎಸ್ 2005, ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2006**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣದಿಂದ, ಸರ್ಕಾರವು, ರಾಜ್ಯದಲ್ಲಿನ ಜಿಲ್ಲಾ ಶಸ್ತ್ರ ಚಿಕಿತ್ಸಕರು, ಜಿಲ್ಲಾ ಆಸ್ಪತ್ರೆ ಇವರುಗಳಿಗೆ ಸಾಂದರ್ಭಿಕ ರಜೆಯನ್ನು ನಿಯಮಾನುಸಾರ ನಿಗದಿಪಡಿಸಿದ ಮಿತಿಯಲ್ಲಿಯೇ ಮಂಜೂರು ಮಾಡಲು ಸಂಬಂಧಿತ ಜಿಲ್ಲಾ ಜಿಲ್ಲಾಧಿಕಾರಿಗಳಿಗೆ ಅಧಿಕಾರವನ್ನು ಈ ಕೂಡಲೇ ಜಾರಿಗೆ ಬರುವಂತೆ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಕೆ. ತೆಗ್ಗಿನಮನಿ**

ಪಿ.ಆರ್. 611

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಕೆ.ಸಿ. ರೆಡ್ಡಿ ಇವರನ್ನು ಮುಖ್ಯಮಂತ್ರಿಗಳ ಸಲಹೆಗಾರರನ್ನಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ:** 1) ಅಧಿಸೂಚನೆ ಸಂಖ್ಯೆ: ಸಿಆಸುಇ 22 ಸೇಇಮು 2006, ದಿನಾಂಕ: 13.03.2006.

2) ಅ.ಟಿ.ಸಂಖ್ಯೆ: ಆಇ 436 ವೆಚ್ಚ-5/06, ದಿನಾಂಕ: 24.03.2006.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ 1 ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಶ್ರೀ ಕೆ.ಸಿ. ರೆಡ್ಡಿ ಇವರನ್ನು ಮುಖ್ಯಮಂತ್ರಿಯವರಿಗೆ ಲೋಕೋಪಯೋಗಿ, ಬಂದರು, ಇಂಧನ ಹಾಗೂ ಜಲಸಂಪನ್ಮೂಲ ಇಲಾಖೆಗಳ ಸಲಹೆಗಾರರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಪ್ರಸಕ್ತ ಮುಖ್ಯಮಂತ್ರಿಯವರ ಪದಾವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ಸಂಪುಟ ದರ್ಜೆಯ ಸ್ಥಾನಮಾನದೊಂದಿಗೆ ನೇಮಿಸಲಾಗಿದೆ. ಸದರಿಯವರಿಗೆ ನೀಡಲಾಗುವ ಸವಲತ್ತುಗಳ ಬಗ್ಗೆ ಪ್ರತ್ಯೇಕ ಆದೇಶ ಹೊರಡಿಸಲಾಗುವುದೆಂದು ಸಹ ತಿಳಿಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ 2 ರಲ್ಲಿ ಓದಲಾಗಿರುವ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಶ್ರೀ ಕೆ.ಸಿ. ರೆಡ್ಡಿಯವರಿಗೆ ರಾಜ್ಯ ಸಚಿವರ ಸ್ಥಾನಮಾನ ನೀಡಲು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 41 ಶಿಸಾನೇ 2002, ದಿನಾಂಕ: 17.06.2002 ರಲ್ಲಿನ ಸೌಲಭ್ಯಗಳನ್ನು ನೀಡಲು ಸಹಮತಿ ನೀಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 22 ಸೇಇಮು 2006(ಭಾ), ಬೆಂಗಳೂರು, ದಿನಾಂಕ: 19ನೇ ಏಪ್ರಿಲ್ 2006**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಕೆ.ಸಿ. ರೆಡ್ಡಿ, ಮುಖ್ಯಮಂತ್ರಿಯವರ ಸಲಹೆಗಾರರು ಇವರಿಗೆ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 41 ಶಿಸಾನೇ 2002, ದಿನಾಂಕ: 17.06.2002 ರಲ್ಲಿನ ಸೌಲಭ್ಯಗಳನ್ನು ಪಡೆಯಲು ಅನುಮತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 436 ವೆಚ್ಚ-5/2006, ದಿನಾಂಕ: 24.03.2006 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 619

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಕಂದಾಯ ಸಚಿವಾಲಯ

**ವಿಷಯ:** ಬೀದರ್ ಜಿಲ್ಲೆ, ಬಸವಕಲ್ಯಾಣ ಉಪ ನೋಂದಣಿ ಕಛೇರಿಯನ್ನು ರೂ.20.00 ಲಕ್ಷಗಳಲ್ಲಿ ನಿರ್ಮಾಣ ಮಾಡಲು ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** 1) ಮಾನ್ಯ ಶಾಸಕರು, ಬಸವಕಲ್ಯಾಣ ಇವರು ಮಾನ್ಯ ಕಂದಾಯ ಸಚಿವರಿಗೆ ಸಲ್ಲಿಸಿರುವ ಮನವಿ ದಿನಾಂಕ: 12.09.2005.

2) ಮಾನ್ಯ ಶಾಸಕರು, ಬಸವಕಲ್ಯಾಣ ಇವರು ನೋಂದಣಿ ಮಹಾಪರಿವೀಕ್ಷಕರಿಗೆ ಸಲ್ಲಿಸಿರುವ ಪತ್ರ ದಿನಾಂಕ: 19.11.2005.

3) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಬಿಎಲ್‌ಡಿ-04/2005-06, ದಿನಾಂಕ: 31.01.2006 / 15.02.2006.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಮನವಿ ದಿನಾಂಕ: 12.09.2005 ರಲ್ಲಿ ಮಾನ್ಯ ಶಾಸಕರು, ಬಸವಕಲ್ಯಾಣ ಇವರು ಸದರಿ ಕ್ಷೇತ್ರಕ್ಕೆ ಉಪ ನೋಂದಣಾಧಿಕಾರಿ ಕಛೇರಿಯ ಅವಶ್ಯಕತೆ ಇದ್ದು, ಸದರಿ ಕಛೇರಿಗೆ ರೂ.30.00 ಲಕ್ಷಗಳನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

2) ಮೇಲೆ (2) ರಲ್ಲಿ ಓದಲಾದ ಪತ್ರ ದಿನಾಂಕ: 19.11.2005 ರಲ್ಲಿ ಮಾನ್ಯ ಶಾಸಕರು, ಬಸವಕಲ್ಯಾಣ ಇವರು ಜಿಲ್ಲಾ ನೋಂದಣಾಧಿಕಾರಿಗಳು, ಬೀದರ್ ಜಿಲ್ಲೆ ಇವರ ಪತ್ರ ದಿನಾಂಕ: 27.11.2005 ಹಾಗೂ ಉಪ ನೋಂದಣಾಧಿಕಾರಿಗಳು, ಬಸವಕಲ್ಯಾಣ ಇವರ ಪತ್ರ ದಿನಾಂಕ: 17.11.2005ನ್ನು ಉಲ್ಲೇಖಿಸಿ ಸದರಿ ಉಪ ನೋಂದಣಿ ಕಛೇರಿ ಕಟ್ಟಡ ನಿರ್ಮಾಣಕ್ಕೆ ಲೋಕೋಪಯೋಗಿ ಇಲಾಖೆಯು ಅಂದಾಜು ಮಾಡಿರುವ ವೆಚ್ಚ ರೂ.20.00 ಲಕ್ಷಗಳೆಂದು ತಿಳಿಸುತ್ತಾ, ಕೂಡಲೇ ಹಣ ಬಿಡುಗಡೆ ಮಾಡಿ ಕಟ್ಟಡ ಕಾಮಗಾರಿ ಪ್ರಾರಂಭಿಸಲು ಸೂಕ್ತ ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ.

3) ಮೇಲೆ (3) ರಲ್ಲಿ ಓದಲಾದ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ದಿನಾಂಕ: 31.01.2006 / 15.02.2006ರ ಪತ್ರದಲ್ಲಿ 2005-06ನೇ ಸಾಲಿನ ಆಯವ್ಯಯದಲ್ಲಿ ಇಲಾಖೆಯ ಕಟ್ಟಡಗಳಿಗಾಗಿ 2.00 ಕೋಟಿ ರೂಪಾಯಿಗಳು ಮೀಸಲಿಟ್ಟಿದ್ದು, ಅದರಲ್ಲಿ

ಬಸವಕಲ್ಯಾಣ ಉಪ ನೋಂದಣಿ ಕಛೇರಿ ಕಟ್ಟಡದ ನಿರ್ಮಾಣಕ್ಕಾಗಿ ತಗಲುವ ವೆಚ್ಚ ರೂ.20.00 ಲಕ್ಷಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 635 ಮುನೋಮು 2005, ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಲೆಕ್ಕ ಶೀರ್ಷಿಕೆ 4059-80-051-0-30-386 ಅಡಿಯಲ್ಲಿ ರೂ.2.00 ಕೋಟಿಗಳನ್ನು ಒದಗಿಸಲಾಗಿರುವ ಹಣದಲ್ಲಿ ರೂ.20.00 ಲಕ್ಷಗಳನ್ನು ಬೀದರ್ ಜಿಲ್ಲೆ, ಬಸವಕಲ್ಯಾಣ ಉಪ ನೋಂದಣಿ ಕಛೇರಿ ಕಟ್ಟಡಕ್ಕಾಗಿ ಉಪಯೋಗಿಸಲು ಆಡಳಿತಾತ್ಮಕ ಮಂಜೂರಾತಿ ನೀಡಿ ಬಿಡುಗಡೆ ಮಾಡಿ ಆದೇಶಿಸಿದೆ ಹಾಗೂ ಲೋಕೋಪಯೋಗಿ ಇಲಾಖೆಯು ರೂಪಿಸಿದ ಅಂದಾಜು ಪಟ್ಟಿ ಆಧರಿಸಿ ಕರ್ನಾಟಕ ಗೃಹ ಮಂಡಳಿ ಮುಖಾಂತರ ನಿರ್ಮಾಣ ಕಾರ್ಯ ಕೈಗೊಳ್ಳಲು ಸೂಚಿಸಲಾಗಿದೆ.

ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಈ ಹಣವನ್ನು ಸಾದಿಲ್ವಾರ್ ಬಿಲ್ಲುಗಳ ಮೂಲಕ ರಾಜ್ಯ ಹುಜೂರು ಖಜಾನೆಯಲ್ಲಿ ಪಡೆಯತಕ್ಕದ್ದು.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996 ರನ್ವಯ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಮೇಶ್ ಕೆ. ಜಾಗೀರ್‌ದಾರ್**

ಪಿ.ಆರ್. 620

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** ವೈ.ಎಸ್. ಹುಚ್ಚಣ್ಣ, ತಹಶೀಲ್ದಾರ್, ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲೆ, ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ:ನಂ:ಲೋಕ್/ಐಎನ್‌ವಿ(ಜಿ)/ಜಿ-9/ಸಿಆರ್-3/2006/ಕೊಪ್ಪಳ, ದಿನಾಂಕ: 13.3.2006.

2) ಕೊಪ್ಪಳ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಕಂದಾಯ/ಸಿಬ್ಬಂದಿ-1/163/2005-06, ದಿನಾಂಕ: 28.2.2006.

**ಪ್ರಸ್ತಾವನೆ:**

ಶ್ರೀ ವೈ.ಎಸ್. ಹುಚ್ಚಣ್ಣ, ತಹಶೀಲ್ದಾರ್, ಗಂಗಾವತಿ ತಾಲ್ಲೂಕು ಇವರು ಫಿರ್ಯಾದುದಾರರಾದ ಶ್ರೀ ಜಗದ್ಗುರು ಸರ್ವಜ್ಞ ಸದ್ಧರ್ಮ ಪೀಠದ ಜಮೀನಿನ ನೋಂದಣಿ ಮಾಡಿಸುವ ಸಂಬಂಧ ರೂ.20,000/- ಗಳ ಅಕ್ರಮ ಸಂಭಾವನೆಯನ್ನು ಪಡೆಯುವಾಗ ಲೋಕಾಯುಕ್ತರ ಬಲೆಗೆ ಲಂಚದ ಹಣದೊಂದಿಗೆ ಸಿಕ್ಕಿಬಿದ್ದಿರುವುದರಿಂದ ಅವರ ವಿರುದ್ಧ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುವುದಾಗಿ ತಿಳಿಸಿ, ಆರೋಪಿತರು ಸುಗಮ ತನಿಖೆಗೆ ಅಡ್ಡಿಯುಂಟು ಮಾಡಿ ಹಸ್ತಕ್ಷೇಪ ಮಾಡುವ ಹಾಗೂ ಅವರ ವಿರುದ್ಧ ಇರುವ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಅವರನ್ನು ಕೂಡಲೇ ಸೇವೆಯಿಂದ ಅಮಾನತ್ತುಗೊಳಿಸಿ ಅವರ ಲೀನ್ (ಸ್ಥಾನ) ವನ್ನು ಬೇರೆ ಕಡೆಗೆ ವರ್ಗಾಯಿಸುವಂತೆ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ: 13.3.2006ರ ಪತ್ರದಲ್ಲಿ ಕೋರಿರುತ್ತಾರೆ.

ಈ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಶ್ರೀ ವೈ.ಎಸ್. ಹುಚ್ಚಣ್ಣ, ತಹಶೀಲ್ದಾರ್, ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲೆ ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 13 ಎಡಿಇ 2006, ಬೆಂಗಳೂರು, ದಿನಾಂಕ: 18ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 10(1)(ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ವೈ.ಎಸ್. ಹುಚ್ಚಣ್ಣ, ತಹಶೀಲ್ದಾರ್, ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲೆ ಇವರನ್ನು ಅವರ ವಿರುದ್ಧದ ಭ್ರಷ್ಟಾಚಾರ ಆರೋಪದ ವಿಚಾರಣೆಯನ್ನು ಬಾಕಿಯಿಟ್ಟು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ವೈ.ಎಸ್. ಹುಚ್ಚಣ್ಣ, ತಹಶೀಲ್ದಾರ್ ಇವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98 ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೆ ಆಪಾದಿತ ಅಧಿಕಾರಿಯು ಕೇಂದ್ರ ಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 621

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಕೃತೋಇ 3 ಕೃಪಇ 2006, ಬೆಂಗಳೂರು, ದಿನಾಂಕ: 3ನೇ ಏಪ್ರಿಲ್ 2006**

ದಿನಾಂಕ: 17.11.2005 ರಂದು ಹೊರಡಿಸಲಾದ ಅಧಿಸೂಚನೆಯ ಪುಟ-4 ರಲ್ಲಿ ಕ್ರಮ ಸಂಖ್ಯೆ 23 ಎಂದು ಎರಡು ಬಾರಿ ಪುನರಾವರ್ತನೆಯಾಗಿದ್ದು, ಕ್ರಮ ಸಂಖ್ಯೆ 23 ರಲ್ಲಿನ ಎಂ.ಬಿ. ಸುಬ್ಬಾರೆಡ್ಡಿ ಎಂಬುದಕ್ಕೆ ಬದಲಾಗಿ ಕ್ರಮ ಸಂಖ್ಯೆ 24 ಶ್ರೀ ಎನ್.ಪಿ. ಸುಬ್ಬಾರೆಡ್ಡಿ ಎಂದು ಓದಿಕೊಂಡು ಕ್ರಮ ಸಂಖ್ಯೆ 24ರ ಮುಂದಕ್ಕೆ ಕ್ರಮಸಂಖ್ಯೆಯನ್ನು ಅನುಕ್ರಮವಾಗಿ ಸರಿಪಡಿಸಿಕೊಂಡಲ್ಲಿ ಕ್ರಮಸಂಖ್ಯೆ-2 ರಲ್ಲಿನ ಶ್ರೀ ವಿ. ಕೃಷ್ಣಮೂರ್ತಿ, ಕ್ರಮ ಸಂಖ್ಯೆ-23 ರಲ್ಲಿ ಶ್ರೀ ಎಂ.ಆರ್. ಬಾಲಕೃಷ್ಣಮೂರ್ತಿ, ಇವರ ಕ್ರಮ ಸಂಖ್ಯೆ ಸರಿ ಇದ್ದು ಇವರೊಂದಿಗೆ ಕ್ರಮ ಸಂಖ್ಯೆ-34 ರಲ್ಲಿನ

ಸಿ.ಎಂ.ಪ್ರದೀಪ್‌ಕುಮಾರ್‌ರವರ ಮತ್ತು ಕ್ರಮ ಸಂಖ್ಯೆ 36 ರಲ್ಲಿರುವ ಶ್ರೀ ಎಸ್.ಜೆ. ಜಯಪ್ರಕಾಶ್‌ರವರ ಕ್ರಮ ಸಂಖ್ಯೆಗಳು ಅನುಕ್ರಮವಾಗಿ 35 ಮತ್ತು 37 ಆಗಲಿದ್ದು ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇದ್ದು ಅಂತಿಮ ತೀರ್ಮಾನಕ್ಕೆ ಒಳಪಟ್ಟಿರುತ್ತದೆ ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಹಾಗೂ ಪುಟ 4 ರಲ್ಲಿನ ಆಡಳಿತಾಧಿಕಾರಿಗಳ ಪಟ್ಟಿಯಲ್ಲಿ ಕ್ರಮ ಸಂಖ್ಯೆ-3 ರಲ್ಲಿನ ಅಧಿಕಾರಿ "ಕೆ. ರಘೋತ್ತಮ, ಸಹಾಯಕ ಯೋಜನಾಧಿಕಾರಿ, ತಾಲ್ಲೂಕು ಪಂಚಾಯ್ತಿ, ಬಳ್ಳಾರಿ" ಎಂಬುದಕ್ಕೆ ಬದಲಾಗಿ "ಶ್ರೀಮತಿ ಕೆ. ರಘೋತ್ತಮ, ಸಹಾಯಕ ಯೋಜನಾಧಿಕಾರಿ, ಜಿಲ್ಲಾ ಪಂಚಾಯ್ತಿ ಬಳ್ಳಾರಿ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.-

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಗುರಾಣಿ**

ಪಿ.ಆರ್. 622 ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** 2005-06ನೇ ಶೈಕ್ಷಣಿಕ ಸಾಲಿನಿಂದ ಗುಲ್ಬರ್ಗಾದ ಶ್ರೀ ಗುರು ಶಾಂತಪ್ಪ ಜವಳಿ ಮೆಮೋರಿಯಲ್ ಟ್ರಸ್ಟ್‌ನ ವಸತಿಯುತ ಶಿಕ್ಷಣ (ಬಿ.ಎಡ್) ಕಾಲೇಜಿಗೆ ಸಂಯೋಜನೆ.

**ಓದಲಾಗಿದೆ:**
1) ದಿನಾಂಕ: 26.12.2003, ಸಂಖ್ಯೆ: ಇಡಿ 210 ಯುಜಿವಿ 2003ರ ಸರ್ಕಾರಿ ಆದೇಶ.
2) ದಿನಾಂಕ: 03.01.2006, ಸಂಖ್ಯೆ: F.SRO/NCTE/B.Ed/2005-06/5080ರ ಎನ್.ಸಿ.ಟಿ.ಇ. ಯ ದಕ್ಷಿಣ ಪ್ರಾದೇಶಿಕ ಸಮಿತಿಯ ಆದೇಶ.
3) ಶ್ರೀ ಗುರು ಶಾಂತಪ್ಪ ಜವಳಿ ಮೆಮೋರಿಯಲ್ ಟ್ರಸ್ಟ್‌ನ ಕಾರ್ಯದರ್ಶಿಯವರ ದಿನಾಂಕ: 24.02.2006ರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಎಡ್./ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ 1993ರ ಎನ್.ಸಿ.ಟಿ.ಇ, ಯ ಅಧಿನಿಯಮದ 14ನೇ ಪ್ರಕರಣದಡಿ ಎನ್.ಸಿ.ಟಿ.ಇ. ಯು ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು 2000ರ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮದ 59 (18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ 1999ರ ಬಿ.ಎಡ್. ಮತ್ತು ಟಿ.ಸಿ.ಹೆಚ್. ಕೋರ್ಸುಗಳ ಪ್ರವೇಶಕ್ಕೆ ಕರ್ನಾಟಕ ಅಭ್ಯರ್ಥಿಗಳ ಆಯ್ಕೆ ನಿಯಮಗಳ 2(1) (ಎ)ನ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ದಿನಾಂಕ: 26.12.2003, ಸಂಖ್ಯೆ: ಇಡಿ 210 ಯುಜಿವಿ 2003ರ ಸರ್ಕಾರಿ ಆದೇಶದಲ್ಲಿ ಶ್ರೀ ಗುರು ಶಾಂತಪ್ಪ ಜವಳಿ ಮೆಮೋರಿಯಲ್ ಟ್ರಸ್ಟ್ ಸ್ಥಾಪಿಸಲು ಉದ್ದೇಶಿಸಿದ್ದ ವಸತಿಯುತ ಶಿಕ್ಷಣ (ಬಿ.ಎಡ್) ಕಾಲೇಜಿನಲ್ಲಿ ಬಿ.ಎಡ್. ಕೋರ್ಸನ್ನು 100 (ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ದಿನಾಂಕ: 03.01.2006, ಸಂಖ್ಯೆ: F.SRO/NCTE/B.Ed/ 2005-06/5080ರ ಎನ್.ಸಿ.ಟಿ.ಇ. ಯ ದಕ್ಷಿಣ ಪ್ರಾದೇಶಿಕ ಸಮಿತಿಯ ಆದೇಶದಲ್ಲಿ ಎನ್.ಸಿ.ಟಿ.ಇ.ಯು ಸದರಿ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಮಾನ್ಯತೆ ನೀಡಿದೆ. ಶ್ರೀ ಗುರು ಶಾಂತಪ್ಪ ಜವಳಿ ಮೆಮೋರಿಯಲ್ ಟ್ರಸ್ಟ್ ಕಾರ್ಯದರ್ಶಿಯವರು ದಿನಾಂಕ: 24.02.2006ರ ಪತ್ರದಲ್ಲಿ ಸದರಿ ಕಾಲೇಜಿನಲ್ಲಿ ಬಿ.ಎಡ್. ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ.

ಅದಕ್ಕಾಗಿ ಈ ಕೆಳಕಂಡ ಆದೇಶ.

### ಸರ್ಕಾರಿ ಆದೇಶ ಸಂಖ್ಯೆ: ಇಡಿ 26 ಯುಜಿವಿ 2006, ಬೆಂಗಳೂರು, ದಿನಾಂಕ: 24ನೇ ಏಪ್ರಿಲ್ 2006

3) 2000ರ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ 1999ರ ಬಿ.ಎಡ್. ಮತ್ತು ಟಿ.ಸಿ.ಹೆಚ್. ಕೋರ್ಸುಗಳ ಪ್ರವೇಶಕ್ಕೆ ಕರ್ನಾಟಕ ಅಭ್ಯರ್ಥಿಗಳ ಆಯ್ಕೆ ನಿಯಮಗಳ 2(1)(ಎ)ನ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಗುಲ್ಬರ್ಗಾದ ಶ್ರೀ ಗುರು ಶಾಂತಪ್ಪ ಜವಳಿ ಮೆಮೋರಿಯಲ್ ಟ್ರಸ್ಟ್‌ನ ವಸತಿಯುತ ಶಿಕ್ಷಣ (ಬಿ.ಎಡ್.) ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ನೂರು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 662 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಸ್.ಎನ್. ನಾಗರಾಜ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಪ್ರಸ್ತುತ ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

### ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 143 ಎಸ್‌ಇಎನ್ 2006, ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2006

ಶ್ರೀ ಎಸ್.ಎನ್. ನಾಗರಾಜ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ, ಇವರು ಪ್ರಸ್ತುತ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಆಯುಕ್ತರಾಗಿ ಕಾರ್ಯನಿರ್ವಹಿಸುತ್ತಿದ್ದು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಎಸಗಿರುವ ಕರ್ತವ್ಯಲೋಪ ಮತ್ತು ನಡತೆ ನಿಯಮಗಳ ಉಲ್ಲಂಘನೆ ಮಾಡಿರುವುದು ಕಂಡುಬಂದಿರುವುದರಿಂದಲೂ,

ಈ ಸಂಬಂಧ ಶ್ರೀ ಎಸ್.ಎನ್. ನಾಗರಾಜ್, ಪ್ರಸ್ತುತ ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ರವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಹಾಗೂ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ಅವರನ್ನು ಸೇವೆಯಿಂದ ಅಮಾನತ್ತುಗೊಳಿಸುವುದು ಅವಶ್ಯವೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(3) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು, ಶ್ರೀ ಎಸ್.ಎನ್. ನಾಗರಾಜ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಪ್ರಸ್ತುತ ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ ಅವರ ವಿರುದ್ಧ ಶಿಸ್ತು ಕ್ರಮವನ್ನು ಕಾಯ್ದಿಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎಸ್.ಎನ್. ನಾಗರಾಜ್ ಅವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 98ರ ನಿಯಮದನ್ವಯ ಜೀವನಾಧಾರ ಭತ್ಯೆಯನ್ನು ಪಡೆಯುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಶ್ರೀ ಎಸ್.ಎನ್. ನಾಗರಾಜ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಅವರು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಶ್ರೀ ಎಸ್.ಎನ್. ನಾಗರಾಜ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಇವರ ಅಮಾನತ್ತಿನಿಂದ ತೆರವಾದ ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ ಈ ಹುದ್ದೆಗೆ ಶ್ರೀ ಹೆಚ್.ಎಸ್. ಅಶೋಕಾನಂದ, ನಿರ್ದೇಶಕರು, ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರು ಇವರನ್ನು ಪ್ರಭಾರೆಯಲ್ಲಿ ಇರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

ಪಿ.ಆರ್. 666

## PERSONNEL AND ADMINISTRATIVE REFORMS SECRETARIAT

**Subject:** Constitution of Steering Committee for implementation of UNDP assisted Project on Capacity Building for Access to Information - Modification - Reg.

**Read:**
1) Government Order No. DPAR 163 KTP 05, dated: 18th January 2006.
2) Addendum No. DPAR 163 KTP 2005, dated: 1st March 2006.
3) D.O. letter No. DPAR/103/RTI/2005, dated: 8th March 2006, from the Principal Secretary to Government, Department of Personnel and Administrative Reforms (Janaspandana).

**PREAMBLE:**

By Government Order dated: 18th January 2006, read at (1) above, a Steering Committee has been constituted for effective implementation of the UNDP assisted Project on Capacity Building for Access to information, with the Principal Secretary to Government, DPAR (Janaspandana Cell), Deputy Commissioners of Chitradurga and Bidar Districts, Director General of Administrative Training Institute, Mysore and Director (Panchayat Raj), Rural Development and Panchayat Raj Department, as its Members.

An Addendum dated: 1st March 2006, read at (2) above, to the said Government Order, has been issued nominating the Director General, Administrative Training Institute, Mysore, as Chairman and Smt. M. Sridevi, Faculty (Law), Administrative Training Institute, Mysore, as the Member-Secretary of the said Committee, who has been nominated as the Nodal Officer for Co-ordination of the Project activities in the Government Order dated: 18th January 2006.

Vide D.O. letter dated: 8th March 2006, read at (3) above, the Principal Secretary to Government, DPAR (Janaspandana), has requested to drop his nomination from the above Committee.

After carefully examining the matter, Government are pleased to partially modify the earlier Government Order dated: 18th January 2006, Hence, the following Order.

**ORDER No. DPAR 163 KTP 2005, Bangalore, Dated: 15th April 2006**

Government Order No.DPAR 163 KTP 2005, dated: 18th January 2006, is partially modified, nominating the Joint Secretary to Government, DPAR (Janaspandana), as one of the Members of the Steering Committee constituted for effective implementation of the UNDP assisted Project on Capacity Building for Access to Information, in place of the Principal Secretary to Government, DPAR (Janaspandana).

By Order and in the name of the Governor of Karnataka,
**T.M. VASUDEVA RAO**
Under Secretary to Government I/c,
Department of Personnel and Administrative Reforms (Training).

P.R. 667

**ಜಲಸಂಪನ್ಮೂಲ ಸಚಿವಾಲಯ**

**ವಿಷಯ:** ಮಲಪ್ರಭಾ ಮತ್ತು ಘಟಪ್ರಭಾ ಪ್ರಾಧಿಕಾರಕ್ಕೆ ಆರು ವಾಹನಗಳನ್ನು ಬಾಡಿಗೆ ಆಧಾರದ ಮೇಲೆ ಪಡೆಯುವ ಕುರಿತು.

**ಓದಲಾಗಿದೆ:** 1) ಮಲಪ್ರಭಾ ಮತ್ತು ಘಟಪ್ರಭಾ ಕಾಡಾ ಬೆಳಗಾಂ ಆಡಳಿತಾಧಿಕಾರಿಯವರ ಪತ್ರ ಸಂಖ್ಯೆ: ಮಘಯೋ:ಕಾಡಾ:ಆ-3: ವಾಜಮ:05-06/521, ದಿನಾಂಕ: 15.9.2005.

2) ಮಲಪ್ರಭಾ ಮತ್ತು ಘಟಪ್ರಭಾ ಕಾಡಾ ಬೆಳಗಾಂ ಆಡಳಿತಾಧಿಕಾರಿಯವರ ಪತ್ರ ಸಂಖ್ಯೆ: ಮಘಯೋ:ಕಾಡಾ:ಆ-3: ವಾಹನ:05-06/757, ದಿನಾಂಕ: 16.11.2005.

3) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 278 ಶಿವಾನೀ 2000, ದಿನಾಂಕ: 18.3.2002.

**ಪ್ರಸ್ತಾವನೆ:**

ಮೇಲೆ ಓದಲಾದ-1ರ ಮಲಪ್ರಭಾ ಮತ್ತು ಘಟಪ್ರಭಾ ಕಾಡಾ ಪ್ರಾಧಿಕಾರದ ಆಡಳಿತಾಧಿಕಾರಿಯವರ ಪ್ರಸ್ತಾವನೆಗಳಲ್ಲಿ ಪ್ರಾಧಿಕಾರದ ವ್ಯಾಪ್ತಿ ಬಗ್ಗೆ ವಿವರಿಸಿ, 2005-06ನೇ ಸಾಲಿಗೆ ಕೇಂದ್ರ ಹಾಗೂ ರಾಜ್ಯದ ವಿವಿಧ ಕಾರ್ಯಕ್ರಮಗಳಿಗಾಗಿ ರೂ.864.50 ಲಕ್ಷ ಕ್ರಿಯಾ ಯೋಜನೆ ಅನುಮೋದನೆಗೊಂಡಿದ್ದು, ಅದನ್ನು ಸಕಾಲದಲ್ಲಿ ಪೂರ್ಣಗೊಳಿಸಲು ಅಲ್ಲಿ ಹೊಂದಿರುವ ಕಛೇರಿಗಳಲ್ಲಿ ಹಾಗೂ ಎಲ್ಲ ವಿಭಾಗಗಳಲ್ಲಿ ಸ್ಥಳ ಪರಿಶೀಲನೆ, ಮೇಲ್ವಿಚಾರಣೆ, ಸಾಲ ವಸೂಲಾತಿಗೆ ಭೇಟಿ ನೀಡುವುದು, ಸಹಕಾರಿ ಸಂಘಗಳಿಂದ ಯಾವುದಾದರೂ ಕಾಮಗಾರಿ ನಡೆಯುತ್ತಿರುವ ಸಂದರ್ಭದಲ್ಲಿ ಅವುಗಳ ಕಾರ್ಯ ವೈಖರಿಗಳ ಬಗ್ಗೆ ನಿಗಾ ವಹಿಸುವುದು ಮುಂತಾದ ಕೆಲಸಗಳಿಗೆ ಪ್ರವಾಸ ಕೈಗೊಳ್ಳುವುದು ಅವಶ್ಯವಾಗಿದೆಯೆಂದು ಪ್ರಾಧಿಕಾರದಲ್ಲಿನ ವಾಹನಗಳ ಅನುಪಸ್ಥಿತಿಯಲ್ಲಿ ಈ ಯೋಜನೆಗಳನ್ನು ಅನುಷ್ಠಾನಗೊಳಿಸುವುದು ತುಂಬ ದುಸ್ತರವಾಗಿದೆಯೆಂದು ವರದಿ ಮಾಡಿದ್ದಾರೆ. ಪ್ರಸ್ತುತ ಪ್ರಾಧಿಕಾರದ ಕೇಂದ್ರ ಕಛೇರಿಯ ಒಟ್ಟು 6 ವಾಹನಗಳಲ್ಲಿ 2 ನಿರುಪಯುಕ್ತ ವಾಹನವೆಂದು ಪರಿಗಣಿಸಲಾಗಿದ್ದು, ಅವುಗಳನ್ನು ನಿಯಮಾನುಸಾರ ವಿಲೇ ಮಾಡಲಾಗಿದೆಯೆಂದು, ಅದೇ ರೀತಿ ಅಧೀನ ಕಾರ್ಯಾಲಯದ ಒಟ್ಟು 13 ವಾಹನಗಳಲ್ಲಿ 8 ವಾಹನಗಳನ್ನು ಈಗಾಗಲೇ ಹರಾಜು ಮಾಡಲಾಗಿದ್ದು, ಇನ್ನುಳಿದ 2 ವಾಹನಗಳು ದುರಸ್ಥಿಯಿಂದಾಗಿ ನಿಂತಿದ್ದು, ವಾಹನವನ್ನು ಹರಾಜು ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆಯೆಂದು ಒಟ್ಟಾರೆ 12 ವಾಹನಗಳು ನಿರುಪಯುಕ್ತವಾಗಿದೆಯೆಂದು ವರದಿ ಮಾಡಿದ್ದಾರೆ. ಆದುದರಿಂದ ಕೃಷಿ ಉಪ ನಿರ್ದೇಶಕರಿಗೆ ಹಾಗೂ ಸಹಾಯಕ ಕೃಷಿ ನಿರ್ದೇಶಕರುಗಳಿಗೆ 6 ವಾಹನಗಳನ್ನು ಬಾಡಿಗೆ ಆಧಾರದ ಮೇಲೆ ತೆಗೆದುಕೊಳ್ಳಲು ಸರ್ಕಾರದ ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಮೇಲೆ ಓದಲಾದ 3ರ ಸರ್ಕಾರದ ಆದೇಶದಲ್ಲಿ ಸರ್ಕಾರದ ಇಲಾಖೆಗಳು ಅಧಿಕೃತ ಕೆಲಸಗಳಿಗಾಗಿ ವಾಹನಗಳನ್ನು ಖರೀದಿಸುವ ಬದಲು ಬಾಡಿಗೆ ಆಧಾರದ ಮೇಲೆ ವಾಹನಗಳನ್ನು ಕಾಲಮಿತಿ ಹಾಗೂ ಗರಿಷ್ಠ ಮಿತಿಗೊಳಪಟ್ಟು ಪಡೆಯಲು ಅವಕಾಶವನ್ನು ಕಲ್ಪಿಸಲಾಗಿದೆ. ಅದರಂತೆ ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಜಸಂಇ 44 ಸಿಎಂಜಿ 2005, ಬೆಂಗಳೂರು, ದಿನಾಂಕ: 22ನೇ ಏಪ್ರಿಲ್ 2006**

ಮಲಪ್ರಭಾ ಮತ್ತು ಘಟಪ್ರಭಾ ಕಾಡಾ ಬೆಳಗಾಂ ಆಡಳಿತಾಧಿಕಾರಿಯವರು ತಮ್ಮ ಪ್ರಸ್ತಾವನೆಯಲ್ಲಿ ಕೋರಿರುವಂತೆ ಮುಂದಿನ ಆದೇಶದವರೆಗೆ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 278 ಶಿವಾನಿ 2000, ದಿನಾಂಕ: 18.3.2002 ರಲ್ಲಿ ತಿಳಿಸಿರುವ ಅಂಶಗಳನ್ನು ಕಟ್ಟುನಿಟ್ಟಾಗಿ ಪಾಲಿಸುವುದರೊಂದಿಗೆ 6 ವಾಹನಗಳನ್ನು ಬಾಡಿಗೆ ಆಧಾರದ ಮೇಲೆ ಪಡೆದುಕೊಳ್ಳಲು ಸರ್ಕಾರವು ಮಂಜೂರಾತಿಯನ್ನು ನೀಡಿರುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಅನಧಿಕೃತ ಟಿಪ್ಪಣಿ ಸಂಖ್ಯೆ: ಲೋಇ 115 ಆಕೋ 3/06, ದಿನಾಂಕ: 17.4.2006 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಂದರ ರಾಜ ಗುಪ್ತ**

ಪಿ.ಆರ್. 669 ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಕಾಡಾ).

**ಶಿಕ್ಷಣ ಸಚಿವಾಲಯ**

**ತಿದ್ದುಪಡಿ ಆದೇಶ ಸಂಖ್ಯೆ: ಇಡಿ 91 YoYaKa 2006, ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2006**

**ವಿಷಯ:** ಬೆಳಗಾವಿ ಜಿಲ್ಲೆ ಬೈಲಹೊಂಗಲ ತಾಲ್ಲೂಕಿನ ಕಿತ್ತೂರಿನ ರಾಣಿ ಚೆನ್ನಮ್ಮ ವಸತಿ ಶಾಲೆಗೆ ಸಿಬ್ಬಂದಿ ವಸತಿ ಗೃಹ ನಿರ್ಮಾಣಕ್ಕೆ ಅನುದಾನ ಬಿಡುಗಡೆ ಕುರಿತು.

**ಉಲ್ಲೇಖ:** ಸರ್ಕಾರಿ ಆದೇಶ ಸಂಖ್ಯೆ: ಇಡಿ 26 ಯೋಯೋಕಾ 2006, ದಿನಾಂಕ: 10.3.2006 (ಇಡಿ 26 ಸ್ವೀಮರ (ಯೋಜನೆ) 2006, ದಿನಾಂಕ: 10.3.2006)

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಸರ್ಕಾರಿ ಆದೇಶದಲ್ಲಿ ಬೆಳಗಾಂ ಜಿಲ್ಲೆ ಬೈಲಹೊಂಗಲ ತಾ. ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆಗೆ ಸಿಬ್ಬಂದಿ ವಸತಿ ಗೃಹ ನಿರ್ಮಾಣಕ್ಕಾಗಿ ರೂ.14.67 ಲಕ್ಷಗಳ ಅಂದಾಜು ಪಟ್ಟಿಯ ನೆಲಮಹಡಿಗೆ ಮಾತ್ರ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ ಎಂಬುದಕ್ಕೆ ಬದಲಾಗಿ ಗೃಹ ನಿರ್ಮಾಣಕ್ಕೆ ರೂ.50.00 ಲಕ್ಷಗಳ (ರೂ. ಐವತ್ತು ಲಕ್ಷಗಳು ಮಾತ್ರ) ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆಯೆಂದು 1/3 ಭಾಗವಾಗಿ ರೂ.14.67 ಲಕ್ಷಗಳನ್ನು (ರೂ. ಹದಿನಾಲ್ಕು ಲಕ್ಷ ಅರವತ್ತೇಳು ಸಾವಿರಗಳು ಮಾತ್ರ) ಬಿಡುಗಡೆ ಮಾಡಲಾಗಿದೆಯೆಂದು ದಿನಾಂಕ: 10.3.2006 ರಿಂದ ಜಾರಿಗೆ ಬರುವಂತೆ ತಿದ್ದಿ ಓದಿಕೊಳ್ಳತಕ್ಕದ್ದು.

ಇನ್ನುಳಿದ ಅಂಶಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 670 ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,

ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಸಿವಿಲ್ ಪ್ರಕ್ರಿಯೆ ಸಂಹಿತೆ 80 ರನ್ವಯ ಸರ್ಕಾರಕ್ಕೆ ನೀಡುವ ನೋಟೀಸ್‌ಗಳಿಗೆ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಅರಣ್ಯ ವಿಭಾಗಕ್ಕೆ ಸಂಬಂಧಪಟ್ಟಂತೆ ನಾಮನಿರ್ದೇಶನ ನೀಡುವ ಕುರಿತು.

**ಓದಲಾಗಿದೆ:** ಸರ್ಕಾರದ ಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಇವರ ಅ.ಸ.ಪತ್ರ ಸಂಖ್ಯೆ: ಲಾ 277 ಎಲ್‌ಎಸಿ 2005, ದಿನಾಂಕ: 15.12.2005.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 15.12.2005ರ ಅರೆ ಸರ್ಕಾರಿ ಪತ್ರದಲ್ಲಿ ಸೇಲಂ ಅಡ್ವೋಕೇಟ್ ಬಾರ್ ಅಸೋಸಿಯೇಷನ್, ತಮಿಳುನಾಡು, ಇವರು ಸಿವಿಲ್ ಪ್ರಕ್ರಿಯೆ ಸಂಹಿತೆ ತಿದ್ದುಪಡಿ 1999 ಮತ್ತು 2000 ಪ್ರಶ್ನಿಸಿ ಭಾರತ ಸರ್ಕಾರದ ವಿರುದ್ಧ ಸಲ್ಲಿಸಿರುವ ರಿಟ್ ಅರ್ಜಿ ಸಂಖ್ಯೆ: 496/2002 ಹಾಗೂ ರಿಟ್ ಅರ್ಜಿ ಸಂಖ್ಯೆ: 570/2002 ರಲ್ಲಿ ಭಾರತದ ಸರ್ವೋಚ್ಚ ನ್ಯಾಯಾಲಯ ದಿನಾಂಕ: 02.08.2005 ರಂದು ತೀರ್ಪು ನೀಡುತ್ತಾ ಈ ಕೆಳಗಿನಂತೆ ಸೂಚಿಸಿರುತ್ತದೆ:

"Wherever any statute requires service of notice as a condition precedent for filing of a suit or other proceedings against the Government, it shall within a period of three months, nominate an officer in each Ministry/Department who shall be responsible for ensuring that replies to notices under section 80 of the Code of Civil Procedure or similar provisions under any State Legislation are sent within the period stipulated in that legislation. The State Governments may provide for a similar provision in the relevant State Laws"

ಅದರಂತೆ, ಸದರಿ ಉದ್ದೇಶಕ್ಕಾಗಿ ಸೂಕ್ತ ಅಧಿಕಾರಿಯನ್ನು ನಾಮ ನಿರ್ದೇಶನ ಮಾಡಿ ವಿವರಗಳನ್ನು ತುರ್ತಾಗಿ ಕಳುಹಿಸಿಕೊಡುವಂತೆ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಸಿವಿಲ್ ಪ್ರಕ್ರಿಯೆ ಸಂಹಿತೆ 80 ರನ್ವಯ ಸರ್ಕಾರಕ್ಕೆ ನೀಡುವ ನೋಟೀಸ್‌ಗಳಿಗೆ ಸಚಿವಾಲಯದ ಅ.ಪಜೀ. ಇಲಾಖೆಯ ಅರಣ್ಯ ವಿಭಾಗಕ್ಕೆ ಸಂಬಂಧಪಟ್ಟಂತೆ ಸೂಕ್ತ ಕಾಲಾವಧಿಯಲ್ಲಿ ಪ್ರತಿಯೊಂದು ನೋಟೀಸ್‌ಗೆ ಉತ್ತರಗಳನ್ನು ನೀಡಲಾಗಿದೆ ಎಂಬುದನ್ನು ಖಚಿತಪಡಿಸಿಕೊಳ್ಳುವ ಸಲುವಾಗಿ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಸರ್ಕಾರದ ಉಪ ಕಾರ್ಯದರ್ಶಿ (ಅರಣ್ಯ) ರವರನ್ನು ನಾಮ ನಿರ್ದೇಶಿಸಲು ಸರ್ಕಾರವು ನಿರ್ಣಯಿಸಿರುವ ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 102 ಎಫ್‌ಡಿಸಿ 2005, ಬೆಂಗಳೂರು, ದಿನಾಂಕ: 20ನೇ ಏಪ್ರಿಲ್ 2006**

ಸಿವಿಲ್ ಪ್ರಕ್ರಿಯೆ ಸಂಹಿತೆ 80 ರನ್ವಯ ಸರ್ಕಾರಕ್ಕೆ ನೀಡುವ ನೋಟೀಸ್‌ಗಳಿಗೆ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಅರಣ್ಯ ವಿಭಾಗಕ್ಕೆ ಸಂಬಂಧಪಟ್ಟಂತೆ ಸೂಕ್ತ ಕಾಲಾವಾಧಿಯಲ್ಲಿ ಪ್ರತಿಯೊಂದು ನೋಟೀಸ್‌ಗೆ ಉತ್ತರಗಳನ್ನು ನೀಡಲಾಗಿದೆ ಎಂಬುದನ್ನು ಖಚಿತಪಡಿಸಿಕೊಳ್ಳುವ ಸಲುವಾಗಿ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಸರ್ಕಾರದ ಉಪ ಕಾರ್ಯದರ್ಶಿ (ಅರಣ್ಯ) ರವರನ್ನು ನಾಮ ನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಆರ್. ವತ್ಸಲ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಪಿ.ಆರ್. 674

## ವಸತಿ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ವಇ 68 ಕೊಮಂಲೆ 2005, ಬೆಂಗಳೂರು, ದಿನಾಂಕ: 22ನೇ ಫೆಬ್ರವರಿ 2006**

**ವಿಷಯ:** ನಿರ್ಮಲ ಜ್ಯೋತಿ ಯೋಜನೆಯಡಿಯಲ್ಲಿ ಕೋಲಾರ ನಗರದ ಕೊಳಚೆ ಪ್ರದೇಶಗಳ ಉನ್ನತೀಕರಣ ಮತ್ತು ಅಭಿವೃದ್ಧಿಪಡಿಸುವ ಕಾಮಗಾರಿ ಕುರಿತು - ಮಂಡಳಿ ಅಧಿಕಾರ ವ್ಯಾಪ್ತಿ ಮೀರಿರುವ ವರ್ಕ್‌ಸ್ಲಿಪ್‌ಗೆ ಮಂಜೂರಾತಿ ನೀಡುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ 68 ಕೊಮಂಲೆ 2005, ದಿನಾಂಕ: 2.1.2006.

ಉಲ್ಲೇಖದಲ್ಲಿರುವ ದಿನಾಂಕ: 2.1.2006ರ ಸರ್ಕಾರದ ಆದೇಶದಲ್ಲಿ ವರ್ಕ್‌ಸ್ಲಿಪ್ ಮೊತ್ತ ರೂ.15.43 ಲಕ್ಷಗಳಿಗೆ ಬದಲಾಗಿ "EIRL-2 ಪ್ರಸ್ತಾವನೆ ರೂ.15.43 ಲಕ್ಷಗಳಿಗೆ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಉಳಿದಂತೆ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಆರ್. ನಾಗರಾಜ**
ಪೀಠಾಧಿಕಾರಿ-4, ವಸತಿ ಇಲಾಖೆ

ಪಿ.ಆರ್. 676

## PERSONNEL & ADMINISTRATIVE REFORMS SECRETARIAT

**ADDENDUM No. DPAR 163 KTP 2005, Bangalore, Dated: 1st March 2006**

**Subject:** Constitution of Steering Committee for implementation of UNDP assisted Project on Capacity Building for Access to Information-Reg.

**Read:** Government Order No. DPAR 163 KTP 05, Dated: 18.01.2006.

Vide G.O.No. dated: 18.1.2006, read above, a Steering Committee for effective implementation of UNDP assisted project on Capacity Building for Access to information has been constituted in Karnataka State. In continuation of the same, the Director General, Administrative Training Institute, Mysore, is nominated as the Chairman of the above mentioned Committee and Smt. M. Sridevi, Faculty (Law),

Administrative Training Institute, Mysore, who has been nominated as the 'Nodal Officer for Co-ordination of the Project activities' is hereby nominated as the Member-Secretary of the said Committee.

By Order and in the name of the Governor of Karnataka,

**H.K. ANASUYA**

P.R. 677

Under Secretary to Government,

Department of Personnel & Administrative Reforms (Training).

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಗಂಗಾಧರಯ್ಯ, ಹಿರಿಯ ಉಪ ನೋಂದಣಾಧಿಕಾರಿ, ಉಪ ನೋಂದಣಿ ಕಛೇರಿ, ತುಮಕೂರು ಇವರಿಗೆ ಸ್ಥಾನಪನ್ನ ಮುಂಬಡ್ತಿ ಕುರಿತು.

**ಓದಲಾಗಿದೆ:** 1) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಇವರ ಪತ್ರ ಸಂಖ್ಯೆ: ಸಿಬ್ಬಂದಿ:1-374/99-2000, ದಿನಾಂಕ: 06.05.2005 ಮತ್ತು 23.03.2006.

2) ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 24 ಮುನೋಸೇ (2) 2004, ದಿನಾಂಕ: 06.01.2005.

**ಪ್ರಸ್ತಾವನೆ:**

ಮೇಲೆ ಓದಲಾದ (1) ರಲ್ಲಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಪ್ರಸ್ತಾವನೆ ಸಲ್ಲಿಸಿ ಶ್ರೀ ಗಂಗಾಧರಯ್ಯ, ಹಿರಿಯ ಉಪ ನೋಂದಣಾಧಿಕಾರಿ, ಇವರಿಗೆ ಸರ್ಕಾರಿ ಆದೇಶ ಸಂಖ್ಯೆ: ಕಂಇ 24 ಮುನೋಸೇ (2) 2004, ದಿನಾಂಕ: 06.01.2005ರ ಪ್ರಕಾರ ದಿನಾಂಕ: 08.10.1990 ರಿಂದ ಜಾರಿಗೆ ಬರುವಂತೆ ಸ್ಥಾನಪನ್ನ ಮುಂಬಡ್ತಿ ನೀಡಲಾಗಿದೆ. ಆದರೆ ಸದರಿ ಅಧಿಕಾರಿಗಳು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 32 ರಡಿಯಲ್ಲಿ ದಿನಾಂಕ: 22.08.1998 ರಿಂದ ಸ್ವತಂತ್ರ ಪ್ರಭಾರದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಅವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾದವರಿಗೆ ಈಗಾಗಲೇ ಸ್ಥಾನಪನ್ನ ಮುಂಬಡ್ತಿ ನೀಡಲಾಗಿದೆಯಾದ್ದರಿಂದ ಸದರಿ ಅಧಿಕಾರಿಗಳಿಗೆ ದಿನಾಂಕ: 22.08.1998 ರಿಂದ ಜಾರಿಗೆ ಬರುವಂತೆ ಸ್ಥಾನಪನ್ನ ಮುಂಬಡ್ತಿ ನೀಡಬೇಕೆಂದು ಕೋರಿದ್ದಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 45 ಮುನೋಸೇ (2) 2005, ಬೆಂಗಳೂರು, ದಿನಾಂಕ: 18ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಅಧಿಸೂಚನೆ ಸಂಖ್ಯೆ: ಕಂಇ 24 ಮುನೋಸೇ (2) 2004, ದಿನಾಂಕ: 06.01.2005ರ ಕ್ರಮ ಸಂಖ್ಯೆ 3 ರಲ್ಲಿಯ ಶ್ರೀ ಗಂಗಾಧರಯ್ಯ ಹಿರಿಯ ಉಪ ನೋಂದಣಾಧಿಕಾರಿ ಇವರಿಗೆ ದಿನಾಂಕ: 08.10.1999 ರಿಂದ ಜಾರಿಗೆ ಬರುವಂತೆ ನೀಡಿದ ಸ್ಥಾನಪನ್ನ ಪದೋನ್ನತಿಯನ್ನು ಮಾರ್ಪಡಿಸಿ ಕರ್ನಾಟಕ ರಾಜ್ಯ ನಾಗರೀಕ ಸೇವಾ (ಆರ್‌ಪಿಪಿ ಮತ್ತು ಪಿ) ನಿಯಮಗಳು 1978ರ ನಿಯಮ 2 (3)ರ ಪ್ರಕಾರ ದಿನಾಂಕ: 22.08.1998 ರಿಂದ ಜಾರಿಗೆ ಬರುವಂತೆ ಪೂರ್ವಾನ್ವಯವಾಗಿ ಹಿರಿಯ ಉಪ ನೋಂದಣಾಧಿಕಾರಿ ಹುದ್ದೆಗೆ ಪದೋನ್ನತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಲಿಂಗ**

ಪಿ.ಆರ್. 678

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** ಪತ್ರ ಬರಹಗಾರರ ಪರವಾನಿಗೆ ನೀಡುವ ವಿಷಯದಲ್ಲಿ ಪರೀಕ್ಷೆ ನಡೆಸುವ ಬಗ್ಗೆ.

**ಓದಲಾಗಿದೆ:** 1) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಆರ್‌ಜಿಎನ್ 46/2001-02, ದಿನಾಂಕ: 16.09.2002.

2) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಆರ್‌ಜಿಎನ್ 93/04-05, ದಿನಾಂಕ: 1.3.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 16.9.2002ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರು ಜಿಲ್ಲಾ ಕೇಂದ್ರಗಳಲ್ಲಿ ಜಿಲ್ಲಾ ನೋಂದಣಾಧಿಕಾರಿಗಳ ಉಸ್ತುವಾರಿಯಲ್ಲಿ ಪತ್ರ ಬರಹಗಾರರ ಲಿಖಿತ ಪರೀಕ್ಷೆಯನ್ನು ನಡೆಸಲು ರೂ.81,431/- ಗಳು ಬೇಕಾಗಿದ್ದು, ಆಡಳಿತಾತ್ಮಕ ಮಂಜೂರಾತಿ ನೀಡುವಂತೆ ಪ್ರಸ್ತಾವನೆಯನ್ನು ಸಲ್ಲಿಸಿ, ಸದರಿ ಪರೀಕ್ಷೆಗೆ ತಗಲುವ ವೆಚ್ಚವನ್ನು "2030-ಸ್ಟ್ಯಾಂಪ್ಸ್ ಅಂಡ್ ರಿಜಿಸ್ಟ್ರೇಷನ್-051 ಕಛೇರಿ ವೆಚ್ಚಗಳು "ಶೀರ್ಷಿಕೆಯಲ್ಲಿ 2002-03ನೇ ಸಾಲಿನ ಆಯವ್ಯಯದಲ್ಲಿ ಭರಿಸಲು ಆಡಳಿತಾತ್ಮಕ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ. ಸದರಿ ಪರೀಕ್ಷೆ ನಡೆಸಲು ಆಗುವ ವೆಚ್ಚವನ್ನು ಸರಿದೂಗಿಸಲು ಅಭ್ಯರ್ಥಿಗಳ ಅರ್ಜಿಯ ಶುಲ್ಕವನ್ನು ರೂ.25/- ರಂತೆ ಹಾಗೂ ಇತರೆ ವರ್ಗದ ಅಭ್ಯರ್ಥಿಗಳಿಗೆ ರೂ.100/- ರಂತೆ ನಿಗದಿಪಡಿಸಿದಲ್ಲಿ ಅಂದಾಜು ರೂ.3,00,000/- ರಿಂದ 3,50,000/- ಗಳಷ್ಟು ಆದಾಯ ಸಂಗ್ರಹವಾಗಬಹುದಾಗಿದ್ದು, ಈ ಮೊತ್ತದಲ್ಲಿಯೇ ಪರೀಕ್ಷೆಯ ವೆಚ್ಚವನ್ನು ಭರಿಸುವುದಾಗಿದ್ದು, ಆದ್ದರಿಂದ ಪರೀಕ್ಷೆ ಶುಲ್ಕ ಹೆಚ್ಚಿಸಲು ಕರ್ನಾಟಕ ನೋಂದಣಿ (ಪತ್ರ ಬರಹಗಾರರ ಪರವಾನಗಿ) ನಿಯಮಾವಳಿ 1978ರ ನಿಯಮ 19ಕ್ಕೆ ತಿದ್ದುಪಡಿ ಮಾಡಲು ನೋಂದಣಿ ಕಾಯಿದೆ 1908ರ ಕಲಂ 69(2)ರ ಅಡಿಯಲ್ಲಿ ಅಧಿಸೂಚನೆ ಹೊರಡಿಸಲು ಹಾಗೂ 2002-03ನೇ ಸಾಲಿನ ಇಲಾಖೆಯು ನಡೆಸಲು ಉದ್ದೇಶಿಸಿದ್ದ ಪರೀಕ್ಷೆಯ ಅಂದಾಜು ವೆಚ್ಚವಾದ ರೂ.81,431/- ಗಳ ಮಂಜೂರಾತಿಗಾಗಿ ಕೋರಿರುತ್ತಾರೆ.

2) ಮೇಲೆ (2) ರಲ್ಲಿ ಓದಲಾದ ಪತ್ರ ದಿನಾಂಕ: 01.03.2006 ರಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರು ಸದರಿ ವೆಚ್ಚವನ್ನು "2030-ಸ್ಟ್ಯಾಂಪ್ಸ್ ಅಂಡ್ ರಿಜಿಸ್ಟ್ರೇಷನ್-051 ಕಛೇರಿ ವೆಚ್ಚಗಳು" ಲೆಕ್ಕ ಶೀರ್ಷಿಕೆಯಡಿಯಲ್ಲಿ ಅನುದಾನ ಇರುವುದರಿಂದ ಸದರಿ ಲೆಕ್ಕ ಶೀರ್ಷಿಕೆಯಲ್ಲಿ ವೆಚ್ಚ ಭರಿಸಲು ಆಡಳಿತಾತ್ಮಕ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 122 ಮುನೋಮು 2006, ಬೆಂಗಳೂರು, ದಿನಾಂಕ: 17ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪರೀಕ್ಷೆ ಶುಲ್ಕ ಹೆಚ್ಚಿಸಲು ಕರ್ನಾಟಕ ನೋಂದಣಿ (ಪತ್ರ ಬರಹಗಾರರ ಪರವಾನಗಿ) ನಿಯಮಾವಳಿ 1978ರ ನಿಯಮ 19ಕ್ಕೆ ತಿದ್ದುಪಡಿ ಮಾಡಲು ನೋಂದಣಿ ಕಾಯಿದೆ 1908ರ ಕಲಂ 69(2)ರ ಅಡಿಯಲ್ಲಿ ಈಗಾಗಲೇ ದಿನಾಂಕ: 28.07.2004 ರಲ್ಲಿ ಅಧಿಸೂಚನೆ ಹೊರಡಿಸಲಾಗಿದ್ದು, ಪ್ರಸ್ತುತ ಜಿಲ್ಲಾ ಕೇಂದ್ರಗಳಲ್ಲಿ ಜಿಲ್ಲಾ ನೋಂದಣಾಧಿಕಾರಿಗಳ ಉಸ್ತುವಾರಿಯಲ್ಲಿ ಪತ್ರ

ಬರಹಗಾರರ ಲಿಖಿತ ಪರೀಕ್ಷೆಯನ್ನು ನಡೆಸಲು ತಗಲುವ ರೂ.81,431/- ಗಳನ್ನು ಲೆಕ್ಕ ಶೀರ್ಷಿಕೆ "2030-ಸ್ಟ್ಯಾಂಪ್ಸ್ ಅಂಡ್ ರಿಜಿಸ್ಟ್ರೇಷನ್-051 ಕಛೇರಿ ವೆಚ್ಚಗಳು" ಅಡಿಯಲ್ಲಿ 2002-03ನೇ ಸಾಲಿನ ಆಯವ್ಯಯದಲ್ಲಿ ಇರುವ ಅನುದಾನದಿಂದ ಭರಿಸಲು ಸರ್ಕಾರವು ಆಡಳಿತಾತ್ಮಕ ಮಂಜೂರಾತಿ ನೀಡಿ ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996 ರನ್ವಯ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಮೇಶ್ ಕೆ. ಜಾಗೀರ್‌ದಾರ್**

ಪಿ.ಆರ್. 679 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ನಿಶಾತ್ ಅಫ್ರೋಜ್, ವೈದ್ಯರು, ದರ್ಜೆ-2(ಯು) ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾ ವಿದ್ಯಾಲಯ ಮತ್ತು ಆಸ್ಪತ್ರೆ, ಮೈಸೂರು ಇವರ ಅನಧಿಕೃತ ಗೈರು ಹಾಜರಿ ಕುರಿತು ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:**
1) ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ: ಭಾವೈಪ.88.ಸಿಬ್ಬಂದಿ(4).2003-04, ದಿನಾಂಕ: 28.8.2004 ಮತ್ತು ದಿನಾಂಕ: 28.6.2005.
2) ಸರ್ಕಾರದ ಪತ್ರ ಸಂಖ್ಯೆ: ಆಕುಕ.358.ಪಿಐಎಂ.2004, ದಿನಾಂಕ: 29.10.2004.
3) ಸರ್ಕಾರದ ಆದೇಶ ಸಂಖ್ಯೆ: ಭಾವೈಪ.88.ಸಿಬ್ಬಂದಿ4.03-04, ದಿನಾಂಕ: 11.02.2005.
4) ಸರ್ಕಾರದ ಪತ್ರ ಸಂಖ್ಯೆ: ಆಕುಕ.358.ಪಿಐಎಂ.2004, ದಿನಾಂಕ: 24.11.2005.

**ಪ್ರಸ್ತಾವನೆ:**

ಮೇಲೆ ಓದಲಾದ (1) ನಿರ್ದೇಶಕರ ಪತ್ರದಲ್ಲಿ ಡಾ: ನಿಶಾತ್ ಅಫ್ರೋಜ್, ವೈದ್ಯರು, ದರ್ಜೆ-2(ಯು) ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾ ವಿದ್ಯಾಲಯ ಮತ್ತು ಆಸ್ಪತ್ರೆ, ಮೈಸೂರು ಇಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 13.1.1994 ರಿಂದ ಕಾಲಕಾಲಕ್ಕೆ ರಜೆ ಅರ್ಜಿಯನ್ನು ಸಲ್ಲಿಸಿ, ರಜೆ ಮಂಜೂರು ಆಗದಿದ್ದರೂ ಪೂರ್ವಾನುಮತಿಯನ್ನು ಪಡೆಯದೆ ಅನಧಿಕೃತ ಗೈರು ಹಾಜರಾಗಿದ್ದು ಇವರಿಗೆ ಹಲವಾರು ತಿಳುವಳಿಕೆ ಪತ್ರಗಳನ್ನು ಕಳುಹಿಸಿದ್ದರೂ ಅವುಗಳು ಸ್ವೀಕೃತವಾಗದೆ ಹಿಂದಿರುಗಿವೆ ಎಂದು ತಿಳಿಸಿದ್ದಾರೆ ಹಾಗೂ ಇವರ ಗೈರು ಹಾಜರಾದ ಬಗ್ಗೆ ದೋಷಾರೋಪಣಾ ಪಟ್ಟಿಯೊಂದಿಗೆ ಷೋಕಾಸ್ ನೋಟೀಸನ್ನು ನೋಂದಾಯಿತಾ ಅಂಚೆ ಮೂಲಕ ಕಳುಹಿಸಿದ್ದು, ಅದು ಸಹ "ನಾಟ್ ಡಿಲವರಿ" ಎಂದು ಅಂಚೆ ಇಲಾಖೆಯ ಷರಾದೊಂದಿಗೆ ಹಿಂದಿರುಗಿ ಬಂದಿದೆ ಎಂದು ತಿಳಿಸಿ ಸೂಕ್ತ ಶಿಸ್ತಿನ ಕ್ರಮವನ್ನು ಜರುಗಿಸುವಂತೆ ನಿರ್ದೇಶಕರು ಕೋರಿದ್ದರು. ಮೇಲೆ ಓದಲಾದ (2)ರ ಪತ್ರದಲ್ಲಿ ನಿರ್ದೇಶಕರ ವ್ಯಾಪ್ತಿಯಲ್ಲಿ ಶಿಸ್ತಿನ ಕ್ರಮವನ್ನು ಜರುಗಿಸಿ ವಿಚಾರಣೆಯನ್ನು ಮುಕ್ತಾಯಗೊಳಿಸಿ ವರದಿ ನೀಡುವಂತೆ ತಿಳಿಸಲಾಗಿತ್ತು.

ನಂತರ ಇವರ ಅನಧಿಕೃತ ಗೈರುಹಾಜರಿ ಬಗ್ಗೆ ಮೇಲೆ (3) ರಲ್ಲಿ ಓದಲಾದ ಆದೇಶದಲ್ಲಿ ನಿರ್ದೇಶಕರು, ಆಡಳಿತಾಧಿಕಾರಿ, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ನಿರ್ದೇಶನಾಲಯ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಿದ್ದರು. ಹಾಗೂ ವಿಚಾರಣಾಧಿಕಾರಿಯವರು ವಿಚಾರಣೆಗೆ ಹಾಜರಾಗಬೇಕೆಂದು ಆಪಾದಿತ ವೈದ್ಯರಿಗೆ ತಿಳಿಸಿದ್ದರು. ವೈದ್ಯರಿಗೆ ವಿಚಾರಣಾಧಿಕಾರಿಗಳ ಮುಂದೆ ಹಾಜರಾಗುವಂತೆ ದಿನಾಂಕ: 23.2.2005ರ ಪ್ರಜಾವಾಣಿ ಮತ್ತು ದಿನಾಂಕ: 22.2.2005ರ ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಿಸಿ 7 ದಿನಗಳೊಳಗೆ ವಿಚಾರಣೆಗೆ ಹಾಜರಾಗುವಂತೆ ತಿಳಿಸಿದ್ದು, ಆರೋಪಿತ ವೈದ್ಯರು ನಿಗದಿತ ಅವಧಿಯಲ್ಲಿ ವಿಚಾರಣೆಗೆ ಹಾಜರಾಗದಿರುವುದರಿಂದ ವಿಚಾರಣಾಧಿಕಾರಿಗಳು ಸದರಿಯವರ ವಿರುದ್ಧ ಗೈರು ಹಾಜರಿ ಆರೋಪವು ಸಾಬೀತಾಗಿರುವುದರಿಂದ ಇವರನ್ನು ಸೇವೆಯಿಂದ ವಜಾ ಮಾಡುವಂತೆ ವರದಿಯನ್ನು ಕಳುಹಿಸಿದ್ದು, ಅದರಂತೆ ಸದರಿ ವೈದ್ಯರನ್ನು ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸುವಂತೆ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯ ನಿರ್ದೇಶಕರು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ (4)ರ ಸರ್ಕಾರಿ ಪತ್ರದಲ್ಲಿ ವಿಚಾರಣಾ ವರದಿಯನ್ನು ಅಂಗೀಕರಿಸಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ (ಸಿ.ಸಿ.ಎ.) ನಿಯಮಗಳು 1957ರ ನಿಯಮ 8 ರನ್ವಯ ಸೂಕ್ತವಾದ ದಂಡನೆಯನ್ನು ಏಕೆ ವಿಧಿಸಬಾರದು ಎಂದು ಎರಡನೇ ಕಾರಣ ಕೇಳುವ ನೋಟೀಸ್ ಜಾರಿ ಮಾಡಿ 15 ದಿವಸದ ಒಳಗಾಗಿ ಲಿಖಿತ ಹೇಳಿಕೆಯನ್ನು ಸಲ್ಲಿಸಬೇಕೆಂದು ಇಲ್ಲದಿದ್ದಲ್ಲಿ ಏಕ ಪಕ್ಷೀಯವಾಗಿ ಅಂತಿಮವಾಗಿ ಕ್ರಮವನ್ನು ತೆಗೆದುಕೊಳ್ಳುವುದಾಗಿ ತಿಳಿಸಲಾಗಿದ್ದು ಹಾಗೂ ಪ್ರಮುಖ ದಿನಪತ್ರಿಕೆಗಳಲ್ಲಿ ಸಹ ಪ್ರಕಟಿಸಲಾಗಿತ್ತು. ಆದರೆ ಆಪಾದಿತ ವೈದ್ಯರಿಂದ ಈವರೆವಿಗೂ ಯಾವುದೇ ಮಾಹಿತಿಯನ್ನು ಸ್ವೀಕೃತವಾಗಿಲ್ಲ.

ಆದುದರಿಂದ ಮೇಲ್ಕಂಡ ಅಂಶಗಳನ್ನು ಆಧರಿಸಿ ಆಪಾದಿತ ವೈದ್ಯರ ಹೇಳಿಕೆ ಏನು ಇಲ್ಲವೆಂದು ಪರಿಗಣಿಸಿ ಅವರು ದೀರ್ಘ ಕಾಲದಿಂದ ಅನಧಿಕೃತ ಗೈರು ಹಾಜರಾಗಿರುವುದು ದೃಢಪಟ್ಟಿರುವ ನಿರ್ಣಯಕ್ಕೆ ಬರಲಾಗಿದ್ದು, ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮಾವಳಿಗಳು 1957ರ ನಿಯಮ 11 ರಡಿಯಲ್ಲಿ ವಿಚಾರಣೆ ಮಾಡಲು ಸಾಧ್ಯವಾಗದೇ ಇರುವುದರಿಂದ ಸರ್ಕಾರವು ಇವರನ್ನು ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 358 ಪಿಐಎಂ 2004, ಬೆಂಗಳೂರು, ದಿನಾಂಕ: 17ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಡಾ: ನಿಶಾತ್ ಅಫ್ರೋಜ್, ವೈದ್ಯರು, ದರ್ಜೆ-2 (ಯು) ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾ ವಿದ್ಯಾಲಯ ಮತ್ತು ಆಸ್ಪತ್ರೆ, ಮೈಸೂರು ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 8(viii)ರ ಅಡಿಯಲ್ಲಿ ಸರ್ಕಾರವು ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸೇವೆಯಿಂದ ವಜಾ ಗೊಳಿಸುವ ದಂಡನೆಯನ್ನು ವಿಧಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್. 681 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಕರ್ನಾಟಕ ಸರ್ಕಾರ ಸಚಿವಾಲಯ

ಸಂಖ್ಯೆ: ಸಿಆಸುಇ 25 ಸೇಸ್ಥಅ 2003, ಬೆಂಗಳೂರು, ದಿನಾಂಕ: 25ನೇ ಮೇ 2006.

ಸುತ್ತೋಲೆ

**ವಿಷಯ:** ದಿನಾಂಕ 1.7.84 ರ ನಂತರ ಸೇವೆಯಲ್ಲಿ ತೊಡಗಿಸಲಾದ ದಿನಗೂಲಿ ನೌಕರರ ಬಗ್ಗೆ.

ದಿನಾಂಕ 1.7.84 ರ ನಂತರ ತೊಡಗಿಸಲಾದ ದಿನಗೂಲಿ ನೌಕರರನ್ನು ಸಕ್ರಮಗೊಳಿಸುವ ಕುರಿತ ಸಿವಿಲ್ ಅಪೀಲು ಸಂಖ್ಯೆ: 3595–3612/99 ಮತ್ತು ಸಿವಿಲ್ ಅಪೀಲು ಸಂಖ್ಯೆ: 1861–2063/2001 ಮತ್ತಿತರ ಸಿವಿಲ್ ಅಪೀಲುಗಳಲ್ಲಿ ಮಾನ್ಯ ಸರ್ವೋಚ್ಛ ನ್ಯಾಯಾಲಯದ ಸಂವಿಧಾನ ಪೀಠವು ತನ್ನ ತೀರ್ಪನ್ನು ದಿನಾಂಕ 10.4.2006 ರಂದು ನೀಡಿದೆ. ಈ ತೀರ್ಪಿನಲ್ಲಿ ಸಕ್ರಮಾತಿಗೆ ಸಂಬಂಧಿಸಿದಂತೆ ಅನುಸರಿಸಬೇಕಾದ ಕಾನೂನನ್ನು ನಿಗದಿಪಡಿಸುತ್ತಾ ನ್ಯಾಯಾಲಯವು ಕೆಳಕಂಡಂತೆ ಗಮನಿಸಿದೆ:–

"...it is clear that adherence to the rule of equality in public employment is a basic feature of our Constitution and since the rule of law is the core of our Constitution, a Court would certainly be disabled from passing an order upholding a violation of Article 14 or in ordering the overlooking of the need to comply with the requirements of Article 14 read with Article 16 of the Constitution. Therefore, consistent with the scheme for public employment, this Court while laying down the law, has necessarily to hold that unless the appointment is in terms of the relevant rules and after a proper competition among qualified persons, the same would not confer any right on the appointee. If it is a contractual appointment, the appointment comes to an end at the end of the contract, if it were an engagement or appointment on daily wages or casual basis, the same would come to an end when it is discontinued. Similarly, a temporary employee could not claim to be made permanent on the expiry of his term of appointment. It has also to be clarified that merely because a temporary employee or a casual wage worker is continued for a time beyond the term of his appointment, he would not be entitled to be absorbed in regular service or made permanent, merely on the strength of such continuance, if the original appointment was not made by following a due process of selection as envisaged by the relevant rules. . . . . . . . . . . . . . . . . . . Merely because, an employee had continued under cover of an order of Court, which we have described as 'litigious employment' in the earlier part of the judgement, he would not be entitled to any right to be absorbed or made permanent in the service."

2. ಮಂಜೂರಾದ ಖಾಲಿ ಹುದ್ದೆಗಳಲ್ಲಿ ಸೂಕ್ತ ಅರ್ಹತೆ ಹೊಂದಿರುವ ನೌಕರರನ್ನು ಅಕ್ರಮವಾಗಿ ನೇಮಕ (irregular appointment) ಮಾಡಿದ್ದು, ಅಂತಹ ನೌಕರರು 10 ವರ್ಷಗಳಿಗಿಂತ ಹೆಚ್ಚಿನ ಅವಧಿಗೆ ಸತತವಾಗಿ ಕಾರ್ಯನಿರ್ವಹಿಸಿದ್ದಲ್ಲಿ ಮತ್ತು ಅಂತಹ ನೌಕರರನ್ನು ನ್ಯಾಯಾಲಯಗಳ ಅಥವಾ ನ್ಯಾಯಮಂಡಳಿಗಳ ಆದೇಶಕ್ಕೊಳಪಟ್ಟು 10 ವರ್ಷಗಳಿಗಿಂತ ಹೆಚ್ಚಿನ ಅವಧಿಗೆ ಮುಂದುವರಿಸದೇ ಇದ್ದಲ್ಲಿ ಅಂತಹ ಅಕ್ರಮ ನೇಮಕಾತಿಗಳನ್ನು ರಾಜ್ಯ ಸರ್ಕಾರಗಳು ಮತ್ತು ಅವುಗಳ ಅಧೀನ ಸಂಸ್ಥೆಗಳು (instrumentalities of state) ಒಂದು ಬಾರಿಯ ಕ್ರಮವಾಗಿ ಸಕ್ರಮಗೊಳಿಸಲು ಯೋಗ್ಯತಾನುಸಾರ ಪರಿಗಣಿಸಿ ಕ್ರಮ ಕೈಗೊಳ್ಳಬೇಕೆಂದು ಸರ್ವೋಚ್ಛ ನ್ಯಾಯಾಲಯವು ನಿರ್ದೇಶಿಸಿದೆ. ಅಲ್ಲದೆ ಮಂಜೂರಾದ ಹುದ್ದೆಗಳು ಖಾಲಿಯಿದ್ದು, ಆ ಹುದ್ದೆಗಳಲ್ಲಿ ದಿನಗೂಲಿ ಅಥವಾ ಸಾಂದರ್ಭಿಕ ನೌಕರರು ಈಗ ಕಾರ್ಯನಿರ್ವಹಿಸುತ್ತಿದ್ದಲ್ಲಿ ಮತ್ತು ಆ ಹುದ್ದೆಗಳನ್ನು ತುಂಬುವುದು ಅಗತ್ಯವಾಗಿದ್ದಲ್ಲಿ, ಅವುಗಳನ್ನು ನಿಯಮಾನುಸಾರ ನೇಮಕಾತಿ ಮಾಡುವ ಮುಖೇನ ತುಂಬತಕ್ಕದ್ದೆಂದು ಸರ್ವೋಚ್ಛ ನ್ಯಾಯಾಲಯವು ಆದೇಶಿಸಿದೆ. ಈ ಪ್ರಕ್ರಿಯೆಯನ್ನು ಸರ್ವೋಚ್ಛ ನ್ಯಾಯಾಲಯದ ತೀರ್ಪಿನ ದಿನಾಂಕದ 6 ತಿಂಗಳೊಳಗೆ ಪ್ರಾರಂಭಿಸಬೇಕೆಂದೂ ಆದೇಶಿಸಲಾಗಿದೆ.

3. ಈಗಾಗಲೇ ಸಕ್ರಮಾತಿ ಮಾಡಲಾದ ಪ್ರಕರಣಗಳು ಮತ್ತು ಸದ್ಯ ನ್ಯಾಯಾಲಯಗಳ ಪರಿಶೀಲನೆಯಲ್ಲಿಲ್ಲದ (not subjudice) ಪ್ರಕರಣಗಳನ್ನು ಈ ತೀರ್ಪಿನ ಹಿನ್ನೆಲೆಯಲ್ಲಿ ಪುನರ್ಪರಿಶೀಲನೆಗೆ ಒಳಪಡಿಸುವ ಅಗತ್ಯವಿಲ್ಲವೆಂದು ಸ್ಪಷ್ಟೀಕರಿಸುತ್ತಾ, ಇನ್ನು ಮುಂದೆ ಸಂವಿಧಾನಾತ್ಮಕ ಅಗತ್ಯತೆಯನ್ನು ಕಡೆಗಣಿಸಿ ಯಾವುದೇ ನೇಮಕಾತಿ ಮಾಡಬಾರದೆಂದೂ ಮತ್ತು ಸಂವಿಧಾನಾತ್ಮಕವಾದ ವಿಧಾನದನುಸಾರ ನೇಮಕಗೊಳ್ಳದ ವ್ಯಕ್ತಿಗಳ ಸೇವೆಯನ್ನು ಸಕ್ರಮಗೊಳಿಸಲು ಅಥವಾ ಅವರ ಸೇವೆಯನ್ನು ಖಾಯಂಗೊಳಿಸಲು ಕ್ರಮ ಕೈಗೊಳ್ಳಬಾರದೆಂದು ಆದೇಶಿಸಿದೆ.

4. ಕೈಗಾರಿಕಾ ವಿವಾದ ಕಾಯ್ದೆಯಲ್ಲಿ ಪರಿಭಾಷಿಸಿರುವಂತೆ 240 ದಿನಗಳ ಸತತ ಸೇವೆಯನ್ನು ಸಲ್ಲಿಸಿದ ದಿನಗೂಲಿ/ಸಾಂದರ್ಭಿಕ ನೌಕರರನ್ನು ಸೇವೆಯಿಂದ ತೆಗೆದು ಹಾಕದಂತೆ ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 8192/90 ರಲ್ಲಿ ದಿನಾಂಕ 11.4.90 ರಂದು ನಿರ್ದೇಶಿಸಿತ್ತು ಎಂಬ ಅಂಶವನ್ನು ಸಂಬಂಧಪಟ್ಟವರೆಲ್ಲರ ಗಮನಕ್ಕೆ ಈ ಸಂದರ್ಭದಲ್ಲಿ ತರಲಾಗಿದೆ. ಅಲ್ಲದೆ ದಿನಾಂಕ 1.7.84 ರ ನಂತರ ನೇಮಕಗೊಂಡು ಸರ್ಕಾರದ ವಿವಿಧ ಇಲಾಖೆಗಳು, ಜಿಲ್ಲಾ ಪಂಚಾಯತ್‌ಗಳು ಮತ್ತು ಸ್ಥಳೀಯ ಸಂಸ್ಥೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ದಿನಗೂಲಿ ನೌಕರರನ್ನು ಸೇವೆಯಿಂದ ತೆಗೆದು ಹಾಕುವುದನ್ನು ತಡೆಹಿಡಿದು ರಿಟ್ ಅರ್ಜಿ ಸಂಖ್ಯೆ: 12610/93 ರಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ 23.4.93 ರಂದು ಆದೇಶಿಸಿತ್ತು. ಹೀಗಾಗಿ ದಿನಾಂಕ 1.7.84 ರ ನಂತರ

ನೇಮಕಗೊಂಡ ದಿನಗೂಲಿ ನೌಕರರನ್ನು ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶಕ್ಕೊಳಪಟ್ಟು ಮುಂದುವರಿಸಲಾಗಿದೆ.

5. ದಿನಾಂಕ 1.7.84 ರ ನಂತರ ಸೇವೆಯಲ್ಲಿ ತೊಡಗಿಸಲಾದ ದಿನಗೂಲಿ ನೌಕರರ ಪ್ರಕರಣಗಳ ಕುರಿತು ಪ್ರತಿಯೊಂದು ಇಲಾಖೆಯಲ್ಲಿನ ನೇಮಕಾತಿ ಪ್ರಾಧಿಕಾರಗಳು ಸರ್ವೋಚ್ಚ ನ್ಯಾಯಾಲಯದ ಮೇಲ್ಕಂಡ ಸೂಚನೆಗಳ ಹಿನ್ನೆಲೆಯಲ್ಲಿ ಮತ್ತು ಹಿಂದಿನ ಪ್ಯಾರಾ 4 ರ ಹಿನ್ನೆಲೆಯಲ್ಲಿ ಪರಿಗಣಿಸಿ ದಿನಗೂಲಿ ನೌಕರರನ್ನು ಮುಂದುವರಿಸಬೇಕೆ ಅಥವಾ ಬೇಡವೇ ಎಂಬ ಬಗ್ಗೆ ಸೂಕ್ತ ತೀರ್ಮಾನವನ್ನು ತೆಗೆದುಕೊಳ್ಳಬೇಕು. ಯಾವುದಾದರೂ ಇಲಾಖೆಯು ಅಂತಹ ನೌಕರರ ಸೇವೆಯನ್ನು ಮುಂದುವರಿಸದೇ ಇರಲು ನಿರ್ಧಾರ ತೆಗೆದುಕೊಂಡಲ್ಲಿ, ಅಂತಹ ಕ್ರಮ ತೆಗೆದುಕೊಳ್ಳುವ ಮೊದಲು ಅಂತಹ ನೌಕರರಿಗೆ ಒಂದು ತಿಂಗಳಿಗೆ ಕಡಿಮೆ ಇಲ್ಲದ ನೋಟೀಸನ್ನು ನೀಡಬೇಕಾಗುತ್ತದೆ.

**ಬಿ.ಕೆ. ದಾಸ್**
ಸರ್ಕಾರದ ಮುಖ್ಯ ಕಾರ್ಯದರ್ಶಿ.

**KARNATAKA GOVERNMENT SECRETARIAT**

**No. DPAR 25 SLC 2003, Bangalore, Dated: 25th May 2006.**

## CIRCULAR

**Sub :** Daily Wage employees engaged after 1-7-1984.

The judgment of the Constitution Bench of the Hon'ble Supreme Court of India in Civil Appeal No. 3595-3612 of 1999 with C.A. No. 1861-2063/2001 and others regarding the regularization of the daily wage employees engaged after 1-7-1984, has been pronounced on 10-4-2006. In the said Judgment while laying down the law relating to regularization, the Court has observed -

"... it is clear that adherence to the rule of equality in public employment is a basic feature of our Constitution and since the rule of law is the core of our Constitution, a Court would certainly be disabled from passing an order upholding a violation of Article 14 or in ordering the overlooking of the need to comply with the requirements of Article 14 read with Article 16 of the Constitution. Therefore, consistent with the scheme for public employment, this Court while laying down the law, has necessarily to hold that unless the appointment is in terms of the relevant rules and after a proper competition among qualified persons, the same would not confer any right on the appointee. If it is a contractual appointment, the appointment comes to an end at the end of the contract, if it were an engagement or appointment on daily wages or casual basis, the same would come to an end when it is discontinued. Similarly, a temporary employee could not claim to be made parmanent on the expiry of his term of appointment. It has also to be clarified that merely because a temporary employee or a casual wage worker is continued for a time beyond the term of his appointment, he would not be entitled to be absorbed in regular service or made permanent, merely on the strength of such continuance, if the original appointment was not made by following a due process of selection as envisaged by the relevant rules................. Merely because, an employee had continued under cover of an order of Court, which we have described as 'litigious employment' in the earlier part of the judgment, he would not be entitled to any right to be absorbed or made permanent in the service."

2. The Supreme Court was pleased to direct that the cases of irregular appointments (not illegal appointments) of duly qualified persons in duly sanctioned vacant posts and who have continued to work for 10 years or more but without the intervention of orders of Courts or of Tribunals, shall be considered on merits and the State Governments and their instrumentalities should take steps to regularize as a one time measure, the services of such irregularly appointed persons who have worked for ten years or more in duly sanctioned posts but not under the cover of orders of courts or of tribunals and should further ensure that regular recruitments are undertaken to fill up those vacant sanctioned posts that require to be filled up, in cases where temporary employees or daily wagers are being now employed. It is also directed that such process must be set in motion within six months from the date of judgment.

3. The Supreme Court was further pleased to clarify that regularization, if any already made, but not sub-judice, need not be reopened based on the above judgment and that there should be no further by-

passing of the constitutional requirement and regularizing or making permanent, those not duly appointed as per the constitutional scheme.

4. In this connection, it is brought to the notice of all concerned that in Writ Petition No. 8192/90, the High Court of Karnataka had directed the State Government on 11-4-1990 "not to terminate the services of daily rated / casual employees who have put in continuous service of 240 days as defined in the Industrial Disputes Act". Further in W.P. No. 12610/93 the High Court of Karnataka directed on 23-4-1993 that "the termination of services of any of the daily wage employees appointed after 1-7-1984 working in various Departments of Government, Establishment of Zilla Panchayaths and local bodies be and the same is hereby stayed." The daily wagers engaged after 1-7-1984 have thus been continued because of the stay orders of the High Court of Karnataka.

5. The appointing authorities in each Department will have to consider the cases of the daily wagers engaged after 1-7-1984 in the light of the above observations of the Supreme Court and of para 4 above and take appropriate decision about their continuance or otherwise. Wherever the Department decides to discontinue their services a notice of not less than one month shall be given to those employees, before taking such action.

**B.K. Das**

P.R. 853 Chief Secretary to Government.

**ಕರ್ನಾಟಕ ಸರ್ಕಾರ ಸಚಿವಾಲಯ**

**ಸಂಖ್ಯೆ: ಸಿಆಸುಇ 5 ಸೇನಿಸಿ 2006, ಬೆಂಗಳೂರು, ದಿನಾಂಕ: 24ನೇ ಮೇ 2006.**

**ಸುತ್ತೋಲೆ**

**ವಿಷಯ:** ಸರ್ಕಾರಿ ನೌಕರರು ವೃತ್ತಪತ್ರಿಕೆಗಳು ಮತ್ತು ಎಲೆಕ್ಟ್ರಾನಿಕ್ ಮಾಧ್ಯಮಗಳಿಗೆ ಹೇಳಿಕೆ / ಸಂದರ್ಶನ ನೀಡುವ ಬಗ್ಗೆ.

**ಉಲ್ಲೇಖ:** ಸುತ್ತೋಲೆ ಸಂಖ್ಯೆ: ಸಿಅಸುಇ 8 ಸೇನಿಸಿ 99 ದಿನಾಂಕ 14-1-2000.

ದಿನಾಂಕ 14.1.2000 ರ ಉಲ್ಲೇಖಿತ ಸುತ್ತೋಲೆಯಲ್ಲಿ ಸರ್ಕಾರಿ ನೌಕರರು ಆಕಾಶವಾಣಿ ಅಥವಾ ದೂರದರ್ಶನ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವ ಮೊದಲು ಅಥವಾ ಯಾವುದೇ ವೃತ್ತಪತ್ರಿಕೆ ಅಥವಾ ನಿಯತಕಾಲಿಕೆಯಲ್ಲಿ ಲೇಖನವನ್ನು ಪ್ರಕಟಿಸುವ ಮೊದಲು ಸರ್ಕಾರದ ಪೂರ್ವಾನುಮತಿಯನ್ನು ಪಡೆಯಬೇಕೆಂದು ತಿಳಿಸಲಾಗಿದೆ. ಈ ಸುತ್ತೋಲೆಯಲ್ಲಿನ ಸೂಚನೆಗಳನ್ನು ಪುನರುಚ್ಚರಿಸಲಾಗಿದೆ.

2. ಸರ್ಕಾರದ ವಿವಿಧ ಯೋಜನಾ ಕಾರ್ಯಕ್ರಮಗಳು, ವಿವಿಧ ವಿಷಯಗಳಿಗೆ ಸಂಬಂಧಿಸಿದ ಕಾರ್ಯನೀತಿಗಳು ಮುಂತಾದವುಗಳ ಬಗ್ಗೆ ಸರ್ಕಾರದ ಪೂರ್ವಾನುಮೋದನೆಯಿಲ್ಲದೆ ಸರ್ಕಾರಿ ನೌಕರರು ವೃತ್ತಪತ್ರಿಕೆಗಳು ಮತ್ತು ಎಲೆಕ್ಟ್ರಾನಿಕ್ ಮಾಧ್ಯಮಕ್ಕೆ ಹೇಳಿಕೆ ನೀಡುತ್ತಿರುವುದು ಅಥವಾ ಸಂದರ್ಶನವನ್ನು ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆ. ಮಾಧ್ಯಮಗಳೊಂದಿಗೆ ಸರ್ಕಾರಿ ನೌಕರರ ಸಂಬಂಧವನ್ನು ನಿರ್ಬಂಧಿಸುವ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 9(ii) ರ ಕೆಳಕಂಡಂತೆ ಇದೆ :

"9(ii) No Government servant shall, except with the previous sanction of the Government or of the prescribed authority or except in the **bona-fide** discharge of his duties ;

(a) publish a book himself or through a published, or contribute an article to a book or a compilation of articles, or

(b) participate in a radio broadcast or contribute an article or write a letter to a newspaper or periodical either in his own name or anonymously or pseudonymously or in the name of any other person."

ಅಖಿಲ ಭಾರತ ಸೇವೆಗಳ (ನಡತೆ) ನಿಯಮಾವಳಿ 1968ರ ನಿಯಮ 6ರಲ್ಲಿಯೂ ಇದಕ್ಕೆ ಸಮಾನವಾದ ಅಸ್ಪದವನ್ನು ಕಲ್ಪಿಸಲಾಗಿದೆ.

3. ಯಾವುದಾದರು ವಿಚಾರ / ಮಾಹಿತಿಗೆ ಹೆಚ್ಚಿನ ಪ್ರಚಾರವನ್ನು ನೀಡುವುದು ಸಾರ್ವಜನಿಕ ಹಿತದೃಷ್ಟಿಯಿಂದ ಅವಶ್ಯಕವೆಂದು ಜಿಲ್ಲಾ ಮಟ್ಟದ ಅಧಿಕಾರಿಯು ಭಾವಿಸಿದಲ್ಲಿ ಅಂತಹ ಪ್ರಚಾರವನ್ನು ಸಂಬಂಧಿತ ಜಿಲ್ಲೆಯಲ್ಲಿನ ವಾರ್ತಾ ಇಲಾಖೆಯ ಹಿರಿಯ ಸಹಾಯಕ ನಿರ್ದೇಶಕ / ಸಹಾಯಕ ನಿರ್ದೇಶಕರ ಮುಖೇನ ಮಾಡಿಸತಕ್ಕದ್ದು ; ಅವರು ಮಾಧ್ಯಮದ ಎಲ್ಲಾ ಪ್ರಕಾರಗಳ ಮೂಲಕ ಮಾಹಿತಿಯ ಅಗತ್ಯ ಪ್ರಚಾರವನ್ನು ಮಾಡಿಸಲು ಕ್ರಮ ಕೈಗೊಳ್ಳತಕ್ಕದ್ದು. ಮಾಧ್ಯಮಕ್ಕೆ ವೈಯಕ್ತಿಕ ವಿವರಣೆ ಅಥವಾ ಸ್ಪಷ್ಟೀಕರಣ ನೀಡುವಂತಹ ಸನ್ನಿವೇಶಗಳ ಹೊರತುಪಡಿಸಿ ಬೇರೆ ಸನ್ನಿವೇಶಗಳಲ್ಲಿ ಪತ್ರಿಕಾಗೋಷ್ಠಿಯನ್ನು ಕರೆಯುವುದಾಗಲಿ ಅಥವಾ ಮಾಧ್ಯಮಗಳೊಂದಿಗೆ ಸಂವಾದ ಕಾರ್ಯಕ್ರಮಗಳನ್ನು ಏರ್ಪಡಿಸುವುದಾಗಲಿ, ಮಾಡತಕ್ಕದ್ದಲ್ಲ. ಅಂತಹ ಸಂವಾದ ಕಾರ್ಯಕ್ರಮಗಳಲ್ಲಿಯೂ ಸಹ ವ್ಯಕ್ತಪಡಿಸಿದ ಅಭಿಪ್ರಾಯವು ಸರ್ಕಾರದ ದೃಷ್ಟಿಕೋನಕ್ಕೆ ಮಾತ್ರ ಸೀಮಿತವಾಗಿರಬೇಕು ಮತ್ತು ಸರ್ಕಾರದ

ಕಾರ್ಯನೀತಿಗಳು, ಕಾರ್ಯಕ್ರಮಗಳು ಮತ್ತು ಆಡಳಿತದ ಬಗ್ಗೆ ವೈಯಕ್ತಿಕ ಟೀಕೆಯನ್ನು ಮಾಡತಕ್ಕದ್ದಲ್ಲ. ಇದು ಕರ್ನಾಟಕ ಸರ್ಕಾರದ ಸಚಿವಾಲಯಕ್ಕೆ ಮತ್ತು ಸಚಿವಾಲಯದಲ್ಲಿ ಕಾರ್ಯನಿರ್ವಹಿಸುವ ಎಲ್ಲ ಅಧಿಕಾರಿ / ನೌಕರರಿಗೂ ಅನ್ವಯವಾಗುತ್ತದೆ.

4. ಸರ್ಕಾರವು ಕೈಗೊಂಡ ಯಾವುದೇ ಕೆಲಸ ಅಥವಾ ಸರ್ಕಾರದ ಕಾರ್ಯನೀತಿಯನ್ನು ಸರ್ಕಾರಿ ನೌಕರರು ಟೀಕಿಸುವುದನ್ನು ಅಖಿಲ ಭಾರತ ಸೇವಾ (ನಡತೆ) ನಿಯಮಾವಳಿ 1968ರ ನಿಯಮ 7 ಮತ್ತು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966 ರ ನಿಯಮ 10 ಇವುಗಳು ನಿಷೇಧಿಸುತ್ತವೆ. ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 10 ಈ ಕೆಳಕಂಡಂತೆ ಇದೆ :

"No Government servant shall, in any radio broadcast or in any document published in his own name or anonymously, pseudonymously or in the name of any other person in any Communication to the Press or in any public utterance, make any statement of fact or opinion.

(i) which has the effect of an adverse criticism of any current or recent policy or action of the Government of Karnataka, Central Government or any other State Government ; "

5. ನಡತೆ ನಿಯಮಾವಳಿಗಳಲ್ಲಿನ ಮೇಲ್ಕಂಡ ಸೂಚನೆಗಳ ಉಲ್ಲಂಘನೆ ಪ್ರಕರಣಗಳನ್ನು ಸರ್ಕಾರವು ಬಹಳ ಗಂಭೀರವಾಗಿ ಪರಿಗಣಿಸುತ್ತದೆ ; ಅಲ್ಲದೆ ಇವುಗಳನ್ನು ಉಲ್ಲಂಘಿಸುವವರನ್ನು ಶಿಸ್ತು ಕ್ರಮಕ್ಕೆ ಒಳಪಡಿಸಲಾಗುವುದೆಂದು ಎಲ್ಲ ಸರ್ಕಾರಿ ನೌಕರರಿಗೆ ಈ ಮೂಲಕ ತಿಳಿಸಲಾಗಿದೆ.

6. ಮೇಲ್ಕಂಡ ಸೂಚನೆಗಳನ್ನು ತಮ್ಮ ಅಧೀನದಲ್ಲಿ ಕಾರ್ಯನಿರ್ವಹಿಸುವ ಸರ್ಕಾರಿ ನೌಕರರ ಗಮನಕ್ಕೆ ತರಬೇಕೆಂದು ಸರ್ಕಾರದ ಎಲ್ಲಾ ಪ್ರಧಾನ ಕಾರ್ಯದರ್ಶಿಗಳು / ಕಾರ್ಯದರ್ಶಿಗಳು ಮತ್ತು ಇಲಾಖಾ ಮುಖ್ಯಸ್ಥರುಗಳನ್ನು ಕೋರಲಾಗಿದೆ.

**ಬಿ.ಕೆ. ದಾಸ್**

ಸರ್ಕಾರದ ಮುಖ್ಯ ಕಾರ್ಯದರ್ಶಿ.

**KARNATAKA GOVERNMENT SECRETARIAT**

**No. DPAR 5 SRC 2006, Bangalore, Dated: 24th May 2006.**

**CIRCULAR**

**Sub :** Government servants giving statements / interview to the Newspapers and the Electronic media - reg.

**Ref :** Circular No. DPAR 8 SRC 99 dated 14-1-2000.

In the Circular dated 14-1-2000 cited above, it has been directed that before taking part in a Programme on All India Radio or Doordarshan or before publishing an article in a newspaper or in a periodical Government servants should obtain prior approval of the Government. The instructions contained in this Circular are reiterated.

2. It has come to the notice of Government that the Government servants are giving statements or interviews to the newspapers and the electronic media regarding the various plan programmes, Government policy on various matters and so on without the prior approval of Government. Rule 9(ii) of the Karnataka Civil Services (Conduct) Rules 1966 which restricts the Government servants' connection with the media reads as follows :

"9(ii) No Government servants shall, except with the previous sanction of the Government or of the prescribed authority or except in the **bona-fide** discharge of his duties ;

(a) publish a book himself or through a publisher, or contribute an article to a book or a compilation of articles, or

(b) participate in a radio broadcast or contribute an article or write a letter to a newspaper or periodical either in his own name or anonymously or pseudonymously or in the name of any other person." Rule 6 of the All India Services (Conduct) Rules 1968 also contains a similar provision.

3. In case a District level officer considers that it is in the public interest to give wide publicity to any piece of information, such publicity is best done through the Sr. Assistant Director / Assistant Director of Information in the District concerned who will ensure the requisite dissemination of the information, through all formats of the Media. Calling for Press Conferences and inter-active sessions with the Media may not be done, unless the matter is of a nature which requires a personal explanation or clarification to

the Media. Even in such interactions, personal comments on policies, programmes and on governance in general needs to be completely refrained from and all spoken matter be confined to the point of view of the Government. This is equally applicable to the Karnataka Government Secretariat and all officers / employees working in the Secretariat.

4. Rule 7 of the All India Services (Conduct) Rules, 1968 and Rule 10 of the Karnataka Civil Services (Conduct) Rules, 1966 prohibit the Government servants from criticising the Government's action or policy. Rule 10 of the Karnataka Civil Services (Conduct) Rules, 1966 is as follows :

"No Government servant shall, in any radio broadcast or in any document published in his own name or anonymously, pseudonymously or in the name of any other person in any Communication to the Press or in any public utterance, make any statement of fact or opinion,

(i) which has the effect of an adverse criticism of any current or recent policy or action of the Government of Karnataka, Central Government or any other State Government ;"

5. Government servants are therefore advised that any violation of the above mentioned provisions of the Conduct Rules would be viewed very seriously by the Government and anyone violating these will be subjected to the pain of disciplinary action.

6. Principal Secretaries / Secretaries to Government and Heads of Departments are requested to bring the above instructions to the notice of the Government servants working under their administrative control.

**B.K. Das**

P.R. 852 Chief Secretary to Government.

**ಶಿಕ್ಷಣ ಸಚಿವಾಲಯ**

**ವಿಷಯ:** 2006–07ನೇ ಶೈಕ್ಷಣಿಕ ಸಾಲಿಗೆ ರಾಜ್ಯದ ವಿವಿಧ ವಿಶ್ವವಿದ್ಯಾಲಯಗಳ ವ್ಯಾಪ್ತಿಗೊಳಪಡುವ ವಿವಿಧ ಶಿಕ್ಷಣ ಸಂಸ್ಥೆಗಳ ಶಿಕ್ಷಣ ಮಹಾವಿದ್ಯಾಲಯ (ಬಿ.ಎಡ್.)ಗಳಿಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಪೀಠಿಕೆ:**

1) ಸರ್ಕಾರಿ / ವಿಶ್ವವಿದ್ಯಾಲಯ / ಅನುದಾನಿತ / ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ./ ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್.ಸಿ.ಟಿ.ಇ. ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

**2)** ಈ ಕೆಳಕಂಡ ಅಂಕಣ (2) ರಲ್ಲಿರುವ ವಿದ್ಯಾಸಂಸ್ಥೆಗಳು ಅಂಕಣ (3) ರಲ್ಲಿರುವ ಶಿಕ್ಷಣ ಸಂಸ್ಥೆಗಳನ್ನು 2004–05ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ ಬಿ.ಎಡ್. ಕೋರ್ಸಿನಲ್ಲಿ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ಅಂಕಣ (4) ರಲ್ಲಿರುವ ವಿಶ್ವವಿದ್ಯಾಲಯಗಳ ಶಿಫಾರಸ್ಸನ್ನು ಆಧರಿಸಿ ಅಂಕಣ (5) ರಲ್ಲಿನ ಸರ್ಕಾರಿ ಆದೇಶದನ್ವಯ ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಅಂಕಣ(6)ರಲ್ಲಿನ ಆದೇಶದನ್ವಯ ಎನ್.ಸಿ.ಟಿ.ಇ. ಸದರಿ ಶಿಕ್ಷಣ ಸಂಸ್ಥೆಗಳ ಬಿ.ಎಡ್. ಕೋರ್ಸಿಗೆ 2005–6ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿರುತ್ತದೆ.

| ಕ್ರ. ಸಂ. | ವಿದ್ಯಾಸಂಸ್ಥೆಯ ಹೆಸರು | ಶಿಕ್ಷಣ ಸಂಸ್ಥೆಯ ಹೆಸರು / ವಿಳಾಸ | ಶಿಫಾರಸ್ಸು ಮಾಡಿದ ವಿಶ್ವವಿದ್ಯಾಲಯ | ಸರ್ಕಾರಿ ಆದೇಶ ಸಂಖ್ಯೆ ಮತ್ತು ದಿನಾಂಕ | ಎನ್.ಸಿ.ಟಿ.ಇ. ಆದೇಶ ಸಂಖ್ಯೆ ಮತ್ತು ದಿನಾಂಕ |
|---|---|---|---|---|---|
| (1) | (2) | (3) | (4) | (5) | (6) |
| 1 | ದಿ ಹೋಲಿ ಫ್ಯಾಮಿಲಿ ಎಜುಕೇಷನ್ ಟ್ರಸ್ಟ್, ಬೈರಸಂದ್ರ, 1ನೇ ಬ್ಲಾಕ್, ಜಯನಗರ, ಬೆಂಗಳೂರು–11. | ಸ್ಟೆಂಟ್ ಜೋಸೆಫ್ ಕಾಲೇಜ್ ಆಫ್ ಎಜುಕೇಷನ್, # 55, ಉತ್ತರಹಳ್ಳಿ ಮೇನ್ ರೋಡ್, ಬೆಂಗಳೂರು–51 | ಬೆಂಗಳೂರು ವಿಶ್ವವಿದ್ಯಾಲಯ | ಇಡಿ 419 ಯುಆರ್‌ಸಿ 2003, ದಿ: 27–12–2003 | F.SRO/NCTE/ B.Ed./2005-06/4776, dated: 21-12-2005 |

| (1) | (2) | (3) | (4) | (5) | (6) |
|---|---|---|---|---|---|
| 2 | ಶ್ರೀಮತಿ ಮೆಹ್ರಾಸ್ ಹೈ ಸ್ಕೂಲ್ ಎಜುಕೇಷನ್ ಸೊಸೈಟಿ, ಮುರುಗೇಶ್ ಮೊದಲಿಯಾರ್ ರೋಡ್, ಫ್ರೇಷರ್ ಟೌನ್, ಬೆಂಗಳೂರು-560005 | ಶ್ರೀಮತಿ ಮೆಹ್ರಾಸ್ ಕಾಲೇಜ್ ಆಫ್ ಎಜುಕೇಷನ್, # 132/1, 5ನೇ ಕ್ರಾಸ್, ಪಿ & ಟಿ ಲೇಔಟ್, ಹೊರಮಾವು, ಬಾಣಸವಾಡಿ, ಬೆಂಗಳೂರು-560 043. | ಬೆಂಗಳೂರು ವಿಶ್ವವಿದ್ಯಾಲಯ | ಇಡಿ 432 ಯುಆರ್‌ಸಿ 2003, ದಿ: 30-12-2003 | F.SRO/NCTE/ B.Ed./2005- 06/4950 dated: 24-12-2005 |

3) ಮೇಲ್ಕಂಡ ಶಿಕ್ಷಣ ಸಂಸ್ಥೆಗಳಲ್ಲಿ ಬಿ.ಎಡ್. ಕೋರ್ಸನ್ನು ಪ್ರಾರಂಭಿಸಲು ಎನ್.ಸಿ.ಟಿ.ಇ. 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದಿಸಿರುವ ಹಿನ್ನೆಲೆಯಲ್ಲಿ ಸದರಿ ಕಾಲೇಜುಗಳಲ್ಲಿ ಬಿ.ಎಡ್. ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವ ವಿಚಾರವನ್ನು ಪರಿಶೀಲಿಸಲಾಗಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 29 ಯುಆರ್‌ಸಿ 2006, ಬೆಂಗಳೂರು, ದಿನಾಂಕ: 22ನೇ ಮೇ 2006.**

4) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ, 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರಾಜ್ಯದ ವಿವಿಧ ವಿಶ್ವವಿದ್ಯಾಲಯಗಳ ವ್ಯಾಪ್ತಿಗೊಳಪಡುವ **ಕೆಳಕಂಡ ವಿದ್ಯಾ ಸಂಸ್ಥೆಗಳ ಶಿಕ್ಷಣ ಸಂಸ್ಥೆಗಳಲ್ಲಿನ ಬಿ.ಎಡ್. ಕೋರ್ಸಿಗೆ 2006-07ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣವನ್ನು** ನಿಗಧಿಪಡಿಸಲಾಗಿದೆ.

| ಕ್ರ. ಸಂ. | ವಿದ್ಯಾಸಂಸ್ಥೆಯ ಹೆಸರು | ಶಿಕ್ಷಣ ಸಂಸ್ಥೆಯ ಹೆಸರು / ವಿಳಾಸ |
|---|---|---|
| (1) | (2) | (3) |
| 1 | ದಿ ಹೋಲಿ ಫ್ಯಾಮಿಲಿ ಎಜುಕೇಷನ್ ಟ್ರಸ್ಟ್, ಬೈರಸಂದ್ರ, 1ನೇ ಬ್ಲಾಕ್, ಜಯನಗರ, ಬೆಂಗಳೂರು-11. | ಸೈಂಟ್ ಜೋಸೆಫ್ ಕಾಲೇಜ್ ಆಫ್ ಎಜುಕೇಷನ್, # 55, ಉತ್ತರಹಳ್ಳಿ ಮೇನ್ ರೋಡ್, ಬೆಂಗಳೂರು-51 |
| 2 | ಶ್ರೀಮತಿ ಮೆಹ್ರಾಸ್ ಹೈ ಸ್ಕೂಲ್ ಎಜುಕೇಷನ್ ಸೊಸೈಟಿ, ಮುರುಗೇಶ್ ಮೊದಲಿಯಾರ್ ರೋಡ್, ಫ್ರೇಷರ್ ಟೌನ್, ಬೆಂಗಳೂರು-560 005 | ಶ್ರೀಮತಿ ಮೆಹ್ರಾಸ್ ಕಾಲೇಜ್ ಆಫ್ ಎಜುಕೇಷನ್, # 132/1, 5ನೇ ಕ್ರಾಸ್ ಪಿ & ಟಿ ಲೇಔಟ್, ಹೊರಮಾವು, ಬಾಣಸವಾಡಿ, ಬೆಂಗಳೂರು-560 043. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**ಎಂ.ಪಿ. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

ಪಿ.ಆರ್. 824

**ಕಂದಾಯ ಸಚಿವಾಲಯ**

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯ ನೌಕರರ ಸಂಘ, ಬೆಂಗಳೂರು ಈ ಸಂಸ್ಥೆಗೆ ಚುನಾವಣೆ ನಡೆಸಲು ಆಡಳಿತಾಧಿಕಾರಿ ನೇಮಕ ಕುರಿತು.

**ಓದಲಾಗಿದೆ:** ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಪತ್ರ ಸಂಖ್ಯೆ: ರಿ.ನಂ. 117/1986-87, ದಿನಾಂಕ: 24/03/2006.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ವರದಿ ಸಲ್ಲಿಸುತ್ತಾ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರನ್ವಯ ನೋಂದಾಯಿಸಲಾದ ಸಂಘಗಳು ಸದರಿ ಕಾಯ್ದೆ ಕಲಂ 11 ರ ಪ್ರಕಾರ ಪ್ರತಿ ವರ್ಷ ಸರ್ವ ಸದಸ್ಯರ ಸಭೆ ಕರೆದು ಕಲಂ 12 ರ ಪ್ರಕಾರ ಸರ್ವ ಸದಸ್ಯರ ಸಭೆಯಲ್ಲಿ ಲೆಕ್ಕಪತ್ರ ಅನುಮೋದನೆ ಪಡೆದು ಕಾರ್ಯಕಾರಿ ಸಮಿತಿಗೆ ಬೈಲಾ ಪ್ರಕಾರ ಚುನಾವಣೆ ನಡೆಸಬೇಕು, ಕಲಂ 13 ರ ಪ್ರಕಾರ ಲೆಕ್ಕಪತ್ರ ಹಾಗೂ ಕಾರ್ಯಕಾರಿ ಸಮಿತಿ ಪಟ್ಟಿಯನ್ನು ಸರ್ವ ಸದಸ್ಯರ ಸಭೆ ನಡೆದ 14 ದಿನಗಳೊಳಗಾಗಿ ಸಂಘಗಳ ನೋಂದಣಾಧಿಕಾರಿಗೆ ಸಲ್ಲಿಸಬೇಕು. ಕಲಂ 11 (2) ರ ಪ್ರಕಾರ ಲೆಕ್ಕಪತ್ರ ವರ್ಷ

ಪೂರ್ಣಗೊಂಡ 9 ತಿಂಗಳೊಳಗಾಗಿ ಸರ್ವ ಸದಸ್ಯರ ಸಭೆ ಕರೆಯಬೇಕು. ಈ ಕಾರಣಗಳಿಂದ ಕರ್ನಾಟಕ ಸರ್ಕಾರ ಸಚಿವಾಲಯ ನೌಕರರ ಸಂಘದ ಸರ್ವ ಸದಸ್ಯರ ಸಭೆಯನ್ನು ಆಡಳಿತ ಮಂಡಳಿಯವರು ಈಗಾಗಲೇ ನಡೆಸಬೇಕಾಗಿತ್ತು. ಸಂಘವು ಸರ್ವ ಸದಸ್ಯರ ಸಭೆ ಕರೆಯಲು ಹೆಚ್ಚಿನ ಅವಧಿ ಕೋರಿ ವಿಶೇಷ ಕಾರಣಗಳಿಂದ ಯಾವುದೇ ಅರ್ಜಿಯನ್ನು ಸಹ ಸಲ್ಲಿಸಿರುವುದಿಲ್ಲ. ಸಂಘದ ಪ್ರಧಾನ ಕಾರ್ಯದರ್ಶಿ ದಿನಾಂಕ: 02/02/2006 ರಂದು ಜಿಲ್ಲಾ ನೋಂದಣಾಧಿಕಾರಿಗಳಿಗೆ ಪತ್ರ ಬರೆದು ದಿನಾಂಕ: 28/01/2006 ರಂದು ಸರ್ವ ಸದಸ್ಯರ ಸಭೆ ನಡೆಸಿರುವುದಾಗಿ ತಿಳಿಸಿದ್ದಾರೆ. ಆದರೆ ಸಭೆಯ ನಡವಳಿಯಲ್ಲಿ ಚುನಾವಣೆ ನಡೆದ ಬಗ್ಗೆ ಮಾಹಿತಿ ಇರುವುದಿಲ್ಲ.

ಕರ್ನಾಟಕ ಸರ್ಕಾರ ಸಚಿವಾಲಯ ನೌಕರರ ಸಂಘದ ಪದಾಧಿಕಾರಿಗಳು ಸೂಕ್ತ ಕಾಲದಲ್ಲಿ ಸರ್ವ ಸದಸ್ಯರ ಸಭೆ ಕರೆದು ಚುನಾವಣೆ ನಡೆಸಲು ವಿಫಲರಾಗಿರುತ್ತಾರೆ. 2002 ರಲ್ಲಿ ನಡೆದ ಕಾರ್ಯಕಾರಿ ಸಮಿತಿ ಚುನಾವಣೆ ಕುರಿತ ಮಾನ್ಯ ನ್ಯಾಯಾಲಯದಲ್ಲಿದ್ದ ಪ್ರಕರಣ ದಿನಾಂಕ: 07/10/2005 ರಂದು ಆದೇಶವಾಗಿರುತ್ತದೆ. ಈ ಸಮಸ್ಯೆಯನ್ನು ಅಂತಿಮಗೊಳಿಸಲು ಇತ್ಯರ್ಥವಾಗಬೇಕಾದರೆ ಸಂಘಕ್ಕೆ ಆಡಳಿತಾಧಿಕಾರಿಗಳ ಮೂಲಕ ಚುನಾವಣೆ ನಡೆಸುವುದು ಸೂಕ್ತವೆಂದು ಜಿಲ್ಲಾ ನೋಂದಣಾಧಿಕಾರಿಗಳು ಅಭಿಪ್ರಾಯ ಪಟ್ಟಿರುತ್ತಾರೆ. ಜಿಲ್ಲಾ ನೋಂದಣಾಧಿಕಾರಿಗಳ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ಸರ್ಕಾರ ಸಚಿವಾಲಯ ನೌಕರರ ಸಂಘಕ್ಕೆ ಆಡಳಿತಾಧಿಕಾರಿಗಳ ಮೂಲಕ ಚುನಾವಣೆ ನಡೆಸುವುದು ಸೂಕ್ತವೆಂಬ ತೀರ್ಮಾನಕ್ಕೆ ಸರ್ಕಾರವು ಬಂದಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 4 ಮುನೊಸೊ 2003, ಬೆಂಗಳೂರು, ದಿನಾಂಕ: 26ನೇ ಮೇ 2006.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಚಿವಾಲಯ ನೌಕರರ ಸಂಘ, ಬಹುಮಹಡಿಗಳ ಕಟ್ಟಡ, ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು-01 ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27 – (A) (1) (b) ಪ್ರಕಾರ ಆಡಳಿತಾಧಿಕಾರಿಗಳ ಮೂಲಕ ಚುನಾವಣೆ ನಡೆಸಲು ಶ್ರೀ ಅಬ್ದುಲ್ ಖದೀರ್, ಅಪರ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ, ಬಹುಮಹಡಿಗಳ ಕಟ್ಟಡ, ಬೆಂಗಳೂರು-01 ಇವರನ್ನು ಚುನಾವಣಾಧಿಕಾರಿಯನ್ನಾಗಿ 3 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 901

**ಶಿವಲಿಂಗ**
ಪೀಠಾಧಿಕಾರಿ,
ಕಂದಾಯ ಇಲಾಖೆ,
(ನೋಂದಣಿ ಮತ್ತು ಮುದ್ರಾಂಕ).

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯ ನೌಕರರ ಸಂಘ, ಬೆಂಗಳೂರು ಈ ಸಂಸ್ಥೆಗೆ ಚುನಾವಣೆ ನಡೆಸಲು ಆಡಳಿತಾಧಿಕಾರಿ ನೇಮಕ ಕುರಿತು.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ಕಂಇ 4 ಮುನೊಸೊ 2003 ದಿನಾಂಕ: 26-5-2006.

(2) ಇಡಿ/ಅಪರ ಕಾ/2/ಪ್ರಾ.ಪ್ರೌ.ಸೆ-206 ದಿನಾಂಕ: 29-5-2006.

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ದಿನಾಂಕ: 26-5-2006 ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯ ನೌಕರರ ಸಂಘ, ಬಹುಮಹಡಿ ಕಟ್ಟಡ, ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು-1 ಈ ಸಂಸ್ಥೆಗೆ ಚುನಾವಣೆ ನಡೆಸಲು ಮೂರು ತಿಂಗಳ ಅವಧಿಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿತ್ತು. ಓದಲಾದ (2) ರಲ್ಲಿ ಆಡಳಿತಾಧಿಕಾರಿಯಾಗಿ ನೇಮಕಗೊಂಡಿದ್ದ ಶ್ರೀ ಅಬ್ದುಲ್ ಖದೀರ್, ಅಪರ ಕಾರ್ಯದರ್ಶಿ, ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ ಇವರು ತಮ್ಮ ಕೆಲಸದ ಒತ್ತಡದಿಂದ ಆಡಳಿತಾಧಿಕಾರಿಯ ಕರ್ತವ್ಯ ನಿರ್ವಹಿಸಲು ಸಾಧ್ಯವಾಗುವುದಿಲ್ಲವೆಂದು ದಿನಾಂಕ: 29-5-2006 ರ ಪತ್ರದಲ್ಲಿ ವರದಿ ನೀಡಿದ್ದಾರೆ. ಸದರಿ ವರದಿಯನ್ನು ಪರಿಶೀಲಿಸಿ ಸರ್ಕಾರವು ಅವರ ಬದಲಿಗೆ ಬೇರೆ ಆಡಳಿತಾಧಿಕಾರಿಯನ್ನು ನೇಮಿಸಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 4 ಮುನೊಸೊ 2003, ಬೆಂಗಳೂರು, ದಿನಾಂಕ: 14ನೇ ಜೂನ್ 2006.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಚಿವಾಲಯ ನೌಕರರ ಸಂಘ, ಬಹುಮಹಡಿಗಳ ಕಟ್ಟಡ, ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು-01 ಈ ಸಂಸ್ಥೆಗೆ ಚುನಾವಣಾಧಿಕಾರಿ ಹಾಗೂ

ಆಡಳಿತಾಧಿಕಾರಿಯಾಗಿ ನೇಮಕ ಮಾಡಲಾಗಿದ್ದ ಶ್ರೀ ಅಬ್ದುಲ್ ಖದೀರ್, ಅಪರ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ ಇವರ ಬದಲಿಗೆ ಶ್ರೀ ರಿಚರ್ಡ್ ಲೋಬೋ, ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿ, ಸಂಸದೀಯ ವ್ಯವಹಾರ ಮತ್ತು ಶಾಸನ ರಚನೆ ಇಲಾಖೆ ಇವರನ್ನು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27–(A) (1) (b) ಪ್ರಕಾರ ಆಡಳಿತಾಧಿಕಾರಿಗಳ ಮೂಲಕ ಚುನಾವಣೆ ನಡೆಸಲು, ಇವರನ್ನು ಚುನಾವಣಾಧಿಕಾರಿಯನ್ನಾಗಿ 3 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 902

**ಶಿವಲಿಂಗ**
ಪೀಠಾಧಿಕಾರಿ,
ಕಂದಾಯ ಇಲಾಖೆ,
(ನೋಂದಣಿ ಮತ್ತು ಮುದ್ರಾಂಕ).

## ಶಿಕ್ಷಣ ಸಚಿವಾಲಯ

**ವಿಷಯ:** ೨೦೦೫-೦೬ನೇ ಶೈಕ್ಷಣಿಕ ಸಾಲಿಗೆ ನಿಪ್ಪಾಣಿಯ ವಿದ್ಯಾ ಸಂವರ್ಧಕ ಮಂಡಳದ ಬಿ.ಪಿ.ಎಡ್. ಕಾಲೇಜಿಗೆ ವಿದ್ಯಾರ್ಥಿ ಪ್ರಮಾಣದ ನಿರ್ಧಾರಣೆ.

**ಓದಲಾಗಿದೆ:** ೧) ದಿನಾಂಕ: ೨೬-೧೨-೨೦೦೩, ಸಂಖ್ಯೆ: ಇಡಿ ೨೦೭ ಯುಆರ್‌ಸಿ ೨೦೦೩ರ ಸರ್ಕಾರಿ ಆದೇಶ.

೨) ದಿನಾಂಕ: ೦೫-೧೦-೨೦೦೫, ಸಂಖ್ಯೆ:F.SRO / NCTE / B.P.Ed / ೨೦೦೫-೦೬ / ೩೩೨೭ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.

೩) ದಿ: ೦೬-೦೪-೨೦೦೬ರ ಅಧ್ಯಕ್ಷರು, ವಿದ್ಯಾ ಸಂವರ್ಧಕ ಮಂಡಳಿ, ನಿಪ್ಪಾಣಿ, ಇವರ ಪತ್ರ.

**ಪೀಠಿಕೆ:**

೧) ಸರ್ಕಾರಿ / ವಿಶ್ವವಿದ್ಯಾಲಯ / ಅನುದಾನಿತ / ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ / ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್‌ಸಿಟಿಇ ಅಧಿನಿಯಮ ೧೯೯೩ರ ೧೪ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮದ ೫೯(೧೮)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿಇಡಿ ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಬ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, ೧೯೯೫ರ ೨(೧)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

೨) ಉಲ್ಲೇಖ(೧)ರಲ್ಲಿರುವ ಸರ್ಕಾರಿ ಆದೇಶದಲ್ಲಿ **ನಿಪ್ಪಾಣಿಯ ವಿದ್ಯಾ ಸಂವರ್ಧಕ ಮಂಡಳದ ಬಿ.ಪಿ.ಎಡ್. ಕಾಲೇಜಿಗೆ ೫೦ (ಐವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಬಿ.ಪಿ.ಎಡ್ ಕೋರ್ಸನ್ನು** ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (೨)ರಲ್ಲಿರುವ ದಿನಾಂಕ: ೦೫-೧೦-೨೦೦೫ರ ಆದೇಶದಲ್ಲಿ ಎನ್‌ಸೀಟಿಇಯು ಸದರಿ ಕಾಲೇಜಿನ ಬಿ.ಪಿ.ಎಡ್ ಕೋರ್ಸಿಗೆ ೨೦೦೫-೦೬ನೇ ಸಾಲಿನಿಂದ ಅನ್ವಯವಾಗುವಂತೆ **೫೦(ಐವತ್ತು)** ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ(೩)ರಲ್ಲಿರುವ ಪತ್ರದಲ್ಲಿ ಮೇಲ್ಕಂಡ ಟ್ರಸ್ಟ್‌ನ ಅಧ್ಯಕ್ಷರು ತಮ್ಮ ಕಾಲೇಜಿನಲ್ಲಿ ಬಿ.ಪಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ ೪೬, ಯುಆರ್‌ಸಿ ೨೦೦೬ ಬೆಂಗಳೂರು, ದಿ: ೧೫ ನೇ ಮೇ ೨೦೦೬.**

೩) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ ೨೦೦೦ದ ೫೯ನೇ ಪ್ರಕರಣದ (೧೮)ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು ೧೯೯೫ರ ೨(೧)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, **ನಿಪ್ಪಾಣಿಯ ವಿದ್ಯಾ ಸಂವರ್ಧಕ ಮಂಡಳದ ಬಿ.ಪಿ.ಎಡ್. ಕಾಲೇಜಿಗೆ** 2005-2006 ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ **50 (ಐವತ್ತು)** ವಿದ್ಯಾರ್ಥಿ ಪ್ರಮಾಣವನ್ನು ನಿಗಧಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 825

**ಎಂ.ಪಿ. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)